# ಕಲಹ ಕುತೂಹಲ

( ನಾಟಕ )

ಲೇಖಕರು :

ಶ್ರೀ ಕ್ಷೀರಸಾಗರ

ಪ್ರಕಾಶಕರು

ವಿಶ್ವ ಸಾಹಿತ್ಯ

ಮೈಸೂರು

# ಮುನ್ನುಡಿ

ಈ ನಾಟಕವು ಪ್ರಬುದ್ಧ ಕರ್ಣಾಟಕ ಪತ್ರಿಕೆಯ ೧೯೪೭ ನೆಯ ವಿನಾಯಕ ಮತ್ತು ದೀಪಾವಳಿ ಸಂಚಿಕೆಗಳಲ್ಲಿ ಪ್ರಕಟವಾಗಿದೆ; ಮತ್ತು ಆಲ್ ಇಂಡಿಯಾ ರೇಡಿಯೋವಿನ ಮದರಾಸ್ ಸ್ಟೇಷನ್ನಿಂದ ೧೯೪೭ ನೆಯ ಡಿಸೆಂಬರ್ ೨೭ ರಲ್ಲಿ ಬ್ರಾಡ್‌ಕಾಸ್ಟ್ ಆಗಿದೆ. ಇದರ ಪ್ರಥಮ ಪ್ರದರ್ಶನವು ೧೯೪೮ ನೆಯ ಮಾರ್ಚಿ ೨೨ ರಲ್ಲಿ ಬೆಂಗಳೂರಿನ ಸರ್ ಪುಟ್ಟಣ್ಣ ಚೆಟ್ಟಿಯವರ ಪುರಭವನದಲ್ಲಿ ಮೈಸೂರು ಸರ್ಕಾರದ ಸಚಿವರಾದ ಶ್ರೀಮಾನ್ ಪಾಮಡಿ ಸುಬ್ಬರಾಮಶೆಟ್ಟಿಯವರ ಅಧ್ಯಕ್ಷತೆಯಲ್ಲಿ ಕಾಲೇಜ್ ವಿದ್ಯಾರ್ಥಿಗಳಿಂದ ನಡೆಸಲ್ಪಟ್ಟಿತು. ಅಂದು ಶ್ರೀಯುತರಾದ ಎನ್. ಶಂಕರರಾವ್, ಪಿ. ಎ. ವೇಣುಗೋಪಾಲ್, ಬಿ. ಆರ್. ರಾಮಕೃಷ್ಣಶಾಸ್ತ್ರೀ, ಮತ್ತು ವಿ. ಮುಕುಂದ್‌ರವರು ಕ್ರಮವಾಗಿ ಶಾಂತಪತಿ, ಲಕ್ಷಮ್ಮ, ತ್ರಿಪುರಾಂತಕಯ್ಯ ಮತ್ತು ಸುಮಕೋಮಲ ಪಾತ್ರಗಳನ್ನು ಬಹಳ ಚೆನ್ನಾಗಿ ಅಭಿನಯಿಸಿದರು.

ಓ ಹೆನ್ರಿಯ "ಎ ಹೇರೆಂ ಟ್ರ್ಯಾಜೆಡಿ" ಎಂಬ ಸಣ್ಣ ಕಥೆಯ ಆಧಾರದ ಮೇಲೆ ಕಟ್ಟಿದ ನಾಟಕವಿದು. ಶ್ರೀಮಾನ್ ಬಿ. ಕೆ. ರಾಮಚಂದ್ರರಾಯರು ಮಾಡಿರುವ ಆ ಕಥೆಯ ಕನ್ನಡ ಅನುವಾದವೂ ನನಗೆ ಉಪಕಾರಿಯಾಗಿದೆ. ನಾಟಕರೀತಿಯ ಸನ್ನಿವೇಶವನ್ನು ಕಲ್ಪಿಸುವ, ಪಾತ್ರಪೋಷಣೆಯ, ಮತ್ತು ರಂಗಭೂಮಿಯ ಇತರ ಆವಶ್ಯಕತೆಗಳ ದೃಷ್ಟಿಯಿಂದ ಆ ಕಥೆಯನ್ನು ಇಲ್ಲಿ ಅನೇಕ ಬದಲಾವಣೆಗಳೊಂದಿಗೆ ತುಂಬ ವಿಸ್ತರಿಸಿದೆ.

ಬೆಂಗಳೂರು
ಜೂನ್, ೧೯೪೮

# ಕಥಾ ಪ್ರವೇಶ

ಒಂದೊಂದು ಸಂಸಾರ ಒಂದೊಂದು ನಮೂನೆ! ಸುಮಕೋಮಲ ಮತ್ತು ಅವಳ ಗಂಡ ತ್ರಿಪುರಾಂತಕಯ್ಯ ಒಂದು ನಮೂನೆ—ಆಗಾಗ ಜಗಳ ಆಡುವರು; ಆದರೆ ಸುಮಕೋಮಲೆಯ ಅತ್ತಿಗೆ ಲಕ್ಷಮ್ಮ ಮತ್ತು ಅಣ್ಣ ಶಾಂತಪತಿ ಇನ್ನೊಂದು ನಮೂನೆ—ಎಂದೂ ಜಗಳ ಆಡಿದವರಲ್ಲ. ಶಾಂತಪತಿ ಮುಂದ್ಲೂರು ನಿವಾಸಿ; ಆ ಊರಿನಲ್ಲಿ ಆತನಿಗೆ ಪಿತ್ರಾರ್ಜಿತವಾದ ಜಮೀನೂ, ಮತ್ತು ಸ್ವಯಾರ್ಜಿತವಾದ ಪೌರಸಭೆ ನೌಕರಿಯೂ ಇವೆ. ಈಗ್ಗೆ ಇಪ್ಪತ್ತು ದಿನಗಳ ಕೆಳಗೆ ತ್ರಿಪುರಾಂತಕಯ್ಯನೂ ಅದೇ ಊರಿಗೆ ವರ್ಗ ಆಗಿ ಬಂದು, ಭಾವನ ಮನೆಯ ಪಕ್ಕದ ಮನೆಯನ್ನೇ ಬಾಡಿಗೆಗೆ ತೆಗೆದುಕೊಂಡ. ಅತ್ತಿಗೆ ನಾದನಿಯರಿಗೆ ಅಷ್ಟಕ್ಕಷ್ಟೆ! ಸುಮಕೋಮಲೆ ಇಂಗ್ಲಿಷ್ ಕಲಿತಿದ್ದಳು. ಆದರೆ ಲಕ್ಷಮ್ಮತ್ತಿಗೆಗೆ ಇಂಗ್ಲಿಷ್ ಬಾರದು. ಹಿಂದಿನ ಭಾನುವಾರ ಲಕ್ಷಮ್ಮತ್ತಿಗೆ ಕಥೇ ಪುಸ್ತಕಕ್ಕೆ ಹೇಳಿಕಳಿಸಿದ್ದಾಗ ಸುಮಕೋಮಲೆಯು ಒಂದು ಇಂಗ್ಲಿಷ್ ಪುಸ್ತಕ ಕಳಿಸಿಕೊಟ್ಟಿದ್ದಳು! ಆಮೇಲೆ ಶುಕ್ರವಾರ ಸಾಯಂಕಾಲ ಸುಮಕೋಮಲೆಯು ಅವಳ ಗಂಡನ ಸಂಗಡ ಆಡಿದ ಜಗಳವನ್ನು ಶನಿವಾರ ಬೆಳಗ್ಗೆ ಲಕ್ಷಮ್ಮತ್ತಿಗೆ ಹಂಗಿಸಿದಳಂತೆ—ನಾದಿನೀ ಮನೆಯ ಒಕ್ಕಲುಗಿತ್ತಿ ಚಿಕ್ಕೀ ಮುಂದೆ! ಇದು ಭಾನುವಾರ ಬೆಳಗ್ಗೆ ನಾದಿನಿಗೆ ಮುಟ್ಟಿ, ನಾದಿನಿಯು ಆ ಮಧ್ಯಾಹ್ನ ಪುರಸತ್ತಾಗಿ ಎಲ್ಲವನ್ನೂ ಗಂಡನ ಮುಂದೆ ಹೇಳಿದಳು. ದಂಪತಿಗಳಿಬ್ಬರೂ ಯೋಚಿಸಿ, ಅತ್ತಿಗೆಗೂ ಅಣ್ಣನಿಗೂ ಜಗಳ ಹಚ್ಚುವ ಪಿತೂರಿಯೊಂದನ್ನು ನಡೆಸಿದರು........ಅದು ಏನು, ಮತ್ತು ಹೇಗೆ ಫಲಿಸಿತು?........

# ಸಿ ದ್ಧ ತೆ

## ಪಾತ್ರ ವಿವರ

೧. **ಶಾಂತಪತಿ :** ಮಧ್ಯವಯಸ್ಸು. ಸೌಮ್ಯವಾದ ದುಂಡುಮುಖ. ದುಂಡುದೇಹ. ನಿಧಾನ, ಕುದುರು. ಸ್ಥಳ ಮುಂದ್ಲೂರು ; ಅಲ್ಲಿ ಪಿತ್ರಾರ್ಜಿತವಾದ ಜಮೀನೂ ಮತ್ತು ಸ್ವಯಾರ್ಜಿತವಾದ ಪೌರ ಸಭೆ ನೌಕರಿಯೂ ಇದೆ.

[ಕ್ರಾಪು ; ಅಕ್ಷತೆ ; ದುಂಡುಮೀಸೆ ; ಖಾದಿ ಬನಿಯನ್ ; ಭುಜದ ಮೇಲೆ ಖಾದಿ ಟವಲು ಅಥವಾ ಮಡಿಸಿದ ಶಾಲು ; ಖಾದಿ ಪಂಚೆಕಚ್ಚೆ ; ಚಪ್ಲಿ.]

೨. **ಲಕ್ಷಮ್ಮತ್ತಿಗೆ :** ಶಾಂತಪತಿಯ ಧರ್ಮಪತ್ನಿ. ಸೌಮ್ಯವಾದ ದುಂಡುಮುಖ.

[ದೊಡ್ಡ ಅಂಚಿನ ಸೀರೆ ; ಕುಬುಸ ; ಕುಂಕುಮ ದುಂಡಾಗಿದೆಯೋ ಅಡ್ಡವಾಗಿದೆಯೋ ಹೇಳುವುದು ಕಷ್ಟ ; ಮೂಗುತಿ, ಓಲೆ, ಗಾಜಿನ ಬಳೆ, ಹಾರ, ಹೂ.]

೩. **ತ್ರಿಪುರಾಂತಕಯ್ಯ :** ಶಾಂತಪತಿಯ ಮೈದುನ—ಖಾಸಾ ತಂಗಿಯ ಗಂಡ. ತೆಳುವಾದ, ಎತ್ತರವಾದ ಯುವಕ. ಕೋಲು ಮುಖ. ಜಾಬುಗಾಲು. ಚುರುಕಾದ ನೋಟ ಮತ್ತು ಬುದ್ಧಿ. ಸ್ವಭಾವ ಸ್ವಲ್ಪ ಜೋರು. ಇದುವರೆಗೆ ಹಿಂದ್ಲೂರಿನಲ್ಲಿದ್ದು, ಈಗ ಇಪ್ಪತ್ತು ದಿವಸಗಳ ಕೆಳಗೆ ಮುಂದ್ಲೂರಿಗೆ ಬಜಾರ್ ಇನ್ಸ್ಪೆಕ್ಟರಾಗಿ ವರ್ಗ ಆಗಿ ಬಂದು, ಭಾವನ ಮನೆಯ ಪಕ್ಕದ ಮನೆಯಲ್ಲೇ ವಾಸವಾಗಿರುವನು.

[ಕ್ರಾಪು ; ಫೆಲ್ಟ್ಹ್ಯಾಟು ; ಖಾಲಿ ಹಣೆ ; ಫ್ರೆಂಚ್ ಮೀಸೆ ; ಗ್ಲಾಡ್‌ನೆಕ್ ಷರಟು (ಟೈ ಇಲ್ಲ) ; ನೇವೀ ಬ್ಲೂ ಕೋಟು ; ಬಿಳೀ ಷರಾಯಿ ; ಚಪ್ಲಿ ; ಬೆತ್ತ ; ಕೈ ಗಡಿಯಾರ ; ಕರವಸ್ತ್ರ.]

೪. **ಸುಮುಕೋಮಲ :** ತ್ರಿಪುರಾಂತಕಯ್ಯನ ಮಡದಿ, ಹಾಗೂ ಶಾಂತಪತಿಯ ಖಾಸಾ ತಂಗಿ. ಆಧುನಿಕ ಶೈಲಿ. ತೆಳು ಮತ್ತು

ಚೆಲು. ತುಂಬಾ ಉತ್ಸಾಹಶಾಲಿ, Qualification: S.S. L.C.—F.A.I.L. ಆದರೂ ಪಾಸ್ ಅಂತ ಹೇಳಿಕೋತಾಳೆ.

[ಸಿಲಕ್ ಸೀರೆ; ಜಾಕೆಟ್; ಥಳಕ್ ಪಿನ್, ಬೊಂಬಾಯಿ ಬಳೆ, ಹಾರ, ಮತ್ತು ಲಾಲಕ್—ಎಲ್ಲಾ ರೋಲ್ಡ್‌ಗೋಲ್ಡ್! ಬೈತಲೆ ಸ್ವಲ್ಪ ಓರೆ; ಹೂ; ದುಂಡು ಕುಂಕುಮ; ಚಪ್ಲಿ; ಕರವಸ್ತ್ರ; ಎಡಹಸ್ತದ ಹಿಂದೆ ಸ್ವಲ್ಪ ಪ್ಲಾಸ್ಟ್ರಿ ಅಂಟಿಸಿದೆ.]

## ರಂಗಮಂಟಪ

ಹಿಂದುಗಡೆಯಿಂದ ಕ್ರಮವಾಗಿ ಮನೆ, ಬೀದಿ, ಮತ್ತು ಅಂಕದ ತೆರೆಗಳು ಇರುವುವು. ಅಂಕಗಳ ಕ್ರಮ ಈ ರೀತಿ ಇದೆ:—

೧. ತ್ರಿಪುರಾಂತಕಯ್ಯನ ಮನೆಯ ಪಡಸಾಲೆ.

೨. ಬೀದಿ—ತ್ರಿಪುರಾಂತಕಯ್ಯನ ಮನೆಯ ಬಳಿ.

೩. ಅಂಕ ೧ ರಂತೆ.

೪. ಇನ್ನೊಂದು ಬೀದಿ.

೫. ಶಾಂತಪತಿಯ ಮನೆಯ ಪಡಸಾಲೆ.

ಇತರ ವಿವರಗಳನ್ನು ಆಯಾ ಅಂಕಗಳಲ್ಲಿ ಕೊಟ್ಟಿದೆ.

## ಕಾಲ

ಭಾನುವಾರ ಹಗಲು ಹನ್ನೆರಡೂವರೆ ಘಂಟೆಯಿಂದ ಸ್ವಲ್ಪ ಕಾಲ.

## ಇತರ ಸಿದ್ಧತೆ

ಮೇಜು, ಸ್ಟೂಲು, ಆರಾಮಕುರ್ಚಿ, ಮಡಿಸುವ ಕುರ್ಚಿಗಳು ೨, ಉಡುಪಿನ ನಿಲುವು, ಬಟ್ಟೆ ಒಣಗುಹಾಕಲು ಕಟ್ಟುವ ಉದ್ದನಾದ ಬಿದಿರಿನ ದಂಡೆ, ಮೇಜಿನ ಹೊದಿಕೆ ವಸ್ತ್ರಗಳು, ಬಾಗಿಲ ತೆರೆ.

ಮೇಜಿನ ಮೇಲಿಡುವ ನಿಲುವು ಕನ್ನಡಿ.

ಶೃಂಗಾರ ಚೂರ್ಣ (ಫೇಸ್ ಪೌಡರ್) ಡಬ್ಬಿ ಮತ್ತು ಪ್ಯಾಡ್.

ಅರ್ಧ ಹಾಕಿರುವ ಪುಟ್ಟ ಕಾಲುಚೀಲ, ಅದರ ದಾರ ಮತ್ತು ಕಡ್ಡಿ.

ಒಣಮೆಣಸಿನಕಾಯಿ ತುಂಬಿರುವ ಕೈಚೀಲ, ವಾಕಿಂಗ್ ಸ್ಟಿಕ್.

ಬಣ್ಣದ ಬೀಸಣಿಗೆ.

ಅಗಲವಾದ ಒರಗುದಿಂಬು.

ಅಂಚೆಗೆ ಹಾಕಲು ಸಿದ್ಧವಾಗಿರುವ ಕವರುಗಳು ೯.

ಟವಲುಗಳು ೨, ಮತ್ತು ಕೈಚೀಲ ೧.

ಗಾಜಿನ ಲೋಟಾಗಳು ೪, ಷರಬತ್ತು.

ಕಾಗದ ಪೊಟ್ಟಣಗಳು—ಇವುಗಳಲ್ಲಿ (i) ಬತ್ತಾಸು, ಮಿಠಾಯಿ, ಕಿತ್ತೀತೊಳೆ ಪೆಪ್ಪರ್‌ಮಿಂಟ್, ಓಂಪುಡಿ; (ii) ಬಣ್ಣ ಬಣ್ಣದ ಟೇಪುಗಳು, ರಿಬ್ಬನ್‌ಗಳು, ಬಳೆ ಸುರುಳಿ; (iii) ಜಾಕೆಟ್ ಬಟ್ಟೆ—ಬಳ್ಳೀ ವರಸೆ ಉಳ್ಳದ್ದು; (iv) ಒಂದು ಜೊತೆ ಹೊಸ ನಮೂನೆ ಸೀರೆ ಇರುವುವು.

ಒಂದು ಜೊತೆ ಬಣ್ಣದ ಗಿಳಿಗಳು (ಬಟ್ಟೆ ಅಥವಾ ಕಾಗದದವು).

ಬೀಗ, ಬೀಗದ ಕೈ.

ಒಂದು ಬಾರ್ ಸೋಪು, ದೊಡ್ಡದೊಂದು ಕುಂಬಳಕಾಯಿ.

ಶಾಂತಪತಿಗೆ ಅಂಚೆಯಲ್ಲಿ ಬಂದಿರುವ ಕಾಗದ—ನಾಟಕದಲ್ಲಿ ಕೊಟ್ಟಿರುವಂತೆ ಅದರಲ್ಲಿ ಬರೆದಿದೆ.

ಬಿಳೀ ಹಾಳೆಯ ದಪ್ಪ ಪುಸ್ತಕ ಮತ್ತು ಪೆನ್ಸಿಲ್.

ದೊಡ್ಡದೊಂದು ಈಳಿಗೇ ಮಣೆ.

ದೊಡ್ಡ ಅಂಚಿನ ಸೀರೆ—ಹಳೆಯದು, ಮಾಸಿದ್ದು; ನಿರಿಹಿಡಿದು ಮಡಿಸಿದೆ.

ದೊಡ್ಡದೊಂದು ಬಕೆಟ್ಟಿನಲ್ಲಿ ನೀರು.

---

ವ್ಯಾಪ್ತಿ : ೧೦೦ ನಿಮಿಷ.

# ಕಲಹ ಕುತೂಹಲ

## ಅಂಕ ೧—ತ್ರಿಪುರಾಂತಕಯ್ಯನ ಮನೆಯ ಪಡಸಾಲೆ

ಅದರ ನಕ್ಷೆ ಹೀಗಿದೆ :




ಅ : ಹೊರ ಬಾಗಿಲು, ಇದರ ಬಳಿ ಸುಮಕೋಮಲೆಯ ಚಪ್ಲಿ ಇವೆ.

ಇ, ಉ : ಒಳ ಬಾಗಿಲು. ತೆರೆ ಇಲ್ಲ.

ಕ : ಆರಾಮಕುರ್ಚಿ. ಇದರ ಮೇಲೆ ಒಂದು ಅಗಲವಾದ ಒರಗು ದಿಂಬು ಇದೆ.

ಚ, ಟ : ಮಡಿಸುವ (ಸುಂದರ್) ಕುರ್ಚಿಗಳು.

ತ : ಸ್ಟೂಲು. ವಸ್ತ್ರ ಹೊದಿಸಿದೆ.

ಪ : ಚಿಕ್ಕ ಮೇಜು. ವಸ್ತ್ರ ಹೊದಿಸಿದೆ. ಇದರ ಮೇಲೆ ನಿಲುವು ಕನ್ನಡಿ; ಶೃಂಗಾರಚೂರ್ಣದ ಡಬ್ಬಿ ಮತ್ತು ಪ್ಯಾಡ್; ಅರ್ಧ ಹಾಕಿರುವ ಪುಟ್ಟ ಕಾಲುಚೀಲ, ಅದರ ದಾರ ಮತ್ತು ಕಡ್ಡಿ; ಸೊಗಸಾದ ಬೀಸಣಿಗೆ; ಬೀಗ, ಬೀಗದಕ್ಕೆ ಇವೆ.

ಯ : ಉಡುಪಿನ ನಿಲುವು. ಇದರ ಮೇಲೆ ಎರಡು ಟವಲು, ಮತ್ತು ಒಂದು ಕೈಚೀಲ ಇವೆ.

ರ, ಲ, ವ : ಸ್ಥಳ ಸಂಕೇತಗಳು.

[ಎದುರು ಗೋಡೆಗೆ ಒಂದು ಚಿತ್ರಪಠ ಹಾಕಿದೆ ]

ಸುಮುಕೋಮಲ : [ಸುಮುಕೋಮಲೆಯು (ರ) ಎಂಬಲ್ಲಿ ನಿಂತು, ಮೇಜಿನ ಮೇಲಿರುವ ಕನ್ನಡಿಯಲ್ಲಿ ನೋಡಿಕೊಳ್ಳುತ್ತ, ಲಘುವಾಗಿ ಹಾಡುತ್ತ, ಮುಖಕ್ಕೆ ಶೃಂಗಾರಚೂರ್ಣ (ಫೇಸ್ ಪೌಡರ್) ಹಾಕಿಕೊಳ್ಳುತ್ತಿರುವಳು.]

[ಅಂಕದ ತೆರೆ ಏಳುವುದು]

ಸುಮುಕೋಮಲ : ಶೃಂಗಾರಚೂರ್ಣ ಹಾಕಿಕೊಂಡು, ಕನ್ನಡಿಯಲ್ಲಿರುವ ಪ್ರತಿಬಿಂಬವನ್ನು ಮೆಚ್ಚಿ, ಮೇಜಿನ ಮೇಲಿರುವ ಪುಟ್ಟಕಾಲುಚೀಲ, ದಾರ ಮತ್ತು ಕಡ್ಡಿಗಳನ್ನು ತೆಗೆದುಕೊಂಡು, ಕಾಲುಚೀಲ ಹಾಕುತ್ತ (ಲ) ಎಂಬಲ್ಲಿಗೆ ಬಂದು, ಕಾಲುಚೀಲ ಹಾಕುವುದನ್ನು ನಿಲ್ಲಿಸಿ (ಅ) ಬಾಗಿಲ ಕಡೆಗೆ ಒಂದು ಸಲ ತಿರುಗಿ ನೋಡಿ, ತನ್ನಲ್ಲಿ:]..ಮಧ್ಯಾಹ್ನಾ ಆದ್ರೂ ಮನೇ ಕಡೆ ಧ್ಯಾಸಾನೇ ಇಲ್ವಲ್ಲಾವಮ್ಮಾ ರಾಯರಿಗೇ! ಬೆಳಗ್ಗೆ ಏಳು ಘಂಟೆಗೆ ಉಪ್ಪಿಟ್ಟೂ ಕಾಫೀ ಮುಗಿಸಿಕೊಂಡು ಮನೆ ಬಿಟ್ಟೋದೋರು ಹನ್ನೆರಡೂವರೆ ಘಂಟೆ ಆದ್ರೂ ವಾಪಸ್ ಬರಲೇ ಬೇಡವೆ?! ಇನ್ನೂ ಮುಗೀಲಿಲ್ವೇನೋ ಬಜಾರ್ ಇನ್ಸ್ಪೆಕ್ಷನ್ನು!

ತೆರೆಯಲ್ಲಿ (ಅ) ಬಳಿ

ತ್ರಿಪುರಾಂತಕಯ್ಯ: [ಜೋರಾಗಿ:] ಹಾಂ ?.....ಗೊತ್ತಾಯ್ತೋ ?..... ಹುಷಾರ್ !....ಹೂಂ !

ಸುಮುಕೋಮಲ : [ತನ್ನಲ್ಲಿ:] ಅಗೋ, ನೆನೆಸಿಕೋತಾ ಇದ್ದಾಗೇ ಬಂದೇಬಿಡ್ತಲ್ಲ ಸವಾರಿ—ಹೂಂಕರಿಸ್ತಾ!— [ಕಾಲುಚೀಲದ ಕೆಲಸದಲ್ಲಿ ತೊಡಗುವಳು.]

[ಪ್ರವೇಶ (ಅ): ತ್ರಿಪುರಾಂತಕಯ್ಯ]

ತ್ರಿಪುರಾಂತಕಯ್ಯ : [ಹ್ಯಾಟ್ ಮತ್ತು ವಾಕಿಂಗ್ ಸ್ಟಿಕ್ ಸಮೇತ, ಜಾಬುಗಾಲುಹಾಕುತ್ತ ಬಿರುಸಾಗಿ ಪ್ರವೇಶಿಸಿ, (ಅ) ಬಳಿಯಲ್ಲೇ ನಿಂತು, ಪಕ್ಕದಲ್ಲಿ

ಒಳಗೆ ಜವಾನ ಚನ್ನನು ನಿಂತಿರುವಂತೆ ಭಾವಿಸಿ, ಯಾಜಮಾನ್ಯದಿಂದ :]....
ಏನೋ, ಚನ್ನಾ,......ನಾಳೇ ದಿವ್ಸ ಆಫೀಸಿಗೆ ಅರ್ಧಘಂಟೆ ಮುಂಚೆ ಬಂದೂ, ನಾಬರೋ ವೇಳೆಗೆ ಆ ಕುರ್ಚೀ, ಮೇಜೂ, ಎಲ್ಲಾ ಧೂಳ್ಹೊಡೆದಿರಬೇಕು!....ಆಂ? ಏನಂದೆ?........ಧೂಳೆಬ್ಬಿಸ್ತೀಯ್ಯಾ! ?........ ಧೂಳ್ಹೆಬ್ಸೋದಲ್ವೋ, ಧೂಳ್ಹೊಡಿ, ಗೊತ್ತಾಯ್ತೋ? ಇಲ್ದಿದ್ರೆ ಗೊತ್ತಿದ್ಯಲ್ಲ—ಫೈರ್ ಹಾಕಿಬಿಡ್ತೀನಿ! ನಿನಗೆಷ್ಟೋ ಸಂಬ್ಳಾ ಬರೋದೂ? ದಿನಾ ಫೈರ್ ಹಾಕಿಬಿಟ್ರೆ ನಿನ್ ಗತೀ ಏನು? ಸಂಬ್ಳಾ ಹೋಗಾಮೇಲೆ ಸಾಲಾಮಾಡಿ ದುಡ್ ಕಟ್ಟಬೇಕಾದೀತಾಮೇಲೆ! ನಿಮ್ಮ ಹಿಂದಿನ ಬಜಾರ್ ಇನ್ಸ್ಪೆಕ್ಟರ ಹಾಗಲ್ಲ ನಾನು!....ಬಜಾರು, ಆಫೀಸ್ನ ಎಲ್ಲಾ ಕೆಡಿಸಿ ಹಾಳ್ಮಾಡಿಬಿಟ್ಟಿದಾನೆ, ವ್ಯಾರಾಯ! ಎಲ್ಲಾ ತಿದ್ದಿಕೊಂಡು ಸರಿಮಾಡ್ಕೋಬೇಕಾಗಿದೆ ನಾನೀಗ!....ಎಲ್ಲಿ, ಆ ಚೀಲ ಕೊಡು ಇಲ್ಲಿ....[ಒಣಮೆಣಸಿನಕಾಯಿ ತುಂಬಿದ ಕೈಚೀಲವನ್ನು ಪಕ್ಕದಿಂದ ಇಸಕೊಂಡು,]....ಎಷ್ಟಿರಭೋದೋ ಚನ್ನಾ ಇದೂ?....ಆಂ?....ಎರಡು ಪಂಚೇರಿರಭೋದೂಂತೀಯಾ?.....ಹಾಗಾದ್ರೆ ಹೋಗ್ಲೀ ಪಾಪ, ಆ ಮೆಣಸಿನಕಾಯಿ ಗಡಂಗ್ ಸಾವ್ಕಾರನ್ನ ಈ ಸಲಕ್ಕೆ ಮಾಫ್ ಮಾಡಿದೀನಿ! ಇನ್ನೊಂದ್ಸಲ ಏನಾದ್ರೂ ಅವನು ಧಾರಣೆ ಹೆಚ್ಚಿಸಿ ಮಾರಿದಾಂದ್ರೇ, ತಕ್ಷಣ ರಿಪೋರ್ಟ್ ಮಾಡಿಬಿಡ್ತೀನಿ!........ಅಲ್ವೋ, ಈ ವೂರಲ್ಲೆಲ್ರೂ ಏನಂತಾ ಮಾತಾಡ್ಕೋತಾರೋ ನನ್ ವಿಷ್ಯವಾಗೀ?..... ಆಂ?....ಹೊಸ ಬಜಾರ್ ಇನ್ಸ್ಪೆಕ್ಟರೂ....?....ಒಳ್ಳೇವ್ರೂಂತಾರೋ? [ತೃಪ್ತಿಯಿಂದ ತಲೆದೂಗುತ್ತ]ಸ್ಸರಿ!....ಆಂ?........ಆದ್ರೆ?........ಆದೇನ್ ಘಟ್ಯಾಗ್ಹೇಳೋ....ಓಹೋ, ಆದ್ರೆ ಸ್ವಲ್ಪ ಜೋರೂಂತಾರೋ?....ಹುಂ! ಅವರಿಗೇನ್ ಗೊತ್ತು? ಜೊಜೊಜ್ಜೋರಾಗೇ ಇರಬೇಕು!—ಇಲ್ದಿದ್ರೆ ಕೆಕ್ಕೆಕ್ಕೆಲ್ಲಾ ಹ್ಯಾಗೆ ನಡ್ಯುತ್ತಂತೆ? ........ಒಳ್ಳೇದು ನೀ ಹೋಗು, ಹೋಗು........[ಬಾಗಿಲಲ್ಲೆ, ಚಪ್ಲಿ ಬಿಟ್ಟು, ತಲೆಯ ಮೇಲಿರುವ ಹ್ಯಾಟನ್ನು ತೆಗೆದು ಕಂಕುಳಿಗೆ ಸೇರಿಸುತ್ತ, ಅವಸರವಾಗಿ ಹೆಂಡತಿಯನ್ನು ಸಮೀಪಿಸುತ್ತ :] ....ಕೋಮ್ಲು, ಸುಂಕೋಮ್ಲು, ಕ್ಷಮ್ಸು ಡಿಯರ್, ಹೊತ್ತಾಗ್ಹೋಯ್ತು! —ತುಂಬಾ ಕಾಯಿಸಿಬಿಟ್ಟೆ ನಿನ್ನ!

ಸುಮುಕೋಮಲ : ಹೂಂ,................ಕಾದೂ ಕಾದೂ ಸಾಕಾ ಗ್ಹೋಯ್ತು !

ತ್ರಿಪುರಾಂತಕಯ್ಯ : ಎದುರು ನೋಡ್ತಾ ಇದ್ದೇನೋ ? !

ಸುಮುಕೋಮಲ : [ಕಣ್ಣು ಅಗಲವಾಗಿ ತೆರೆದು]... ....ಹೂಂ,........ ಎದುರು ನೋಡೀ ನೋಡೀ, ಕಣ್ಣುಗುಡ್ಡೆ ಎಲ್ಲಾ ನೋಯ್ತಾ ಇವೆ ತುಂಬಾ !

ತ್ರಿಪುರಾಂತಕಯ್ಯ : ಅ್ಹಯೋ ಪಾಪ !...........ಏನ್ಮಾಡ್ಲಿ, ಈ ಹೊತ್ತೆಷ್ಠೊತ್ತಾದ್ರೂ ಮುಗೀಲೇವೊಲ್ದು ಆ ಹಾಳಾದ ಬಜಾರ್ ಇಕ್ಸ್ಪೆರ್ಕ್ಷ !....[ಮೆಣಸಿನಕಾಯ ಚೀಲವನ್ನು ನೀಡುವನು.]

ಸುಮುಕೋಮಲ : [ಕಾಲುಚೀಲದ ಸಾಮುಗ್ರಿಯನ್ನು ಮೇಜಿನ ಮೇಲಿಟ್ಟು, ಗಂಡನ ಕೈಯಲ್ಲಿರುವ ಚೀಲವನ್ನು ತೆಗೆದುಕೊಳ್ಳುತ್ತ,]....ತುಂಬಾ ಜೋರಾಗಿ ನಡೆದಿರೋಹಾಗಿದ್ಯಲ್ಲಾ ಬಜಾರ್ ಇಕ್ಸ್ಪೆಕ್ಷನ್ನೂ !....ಆಂ ಕ್ಷಿ ! [ಎಂದು ಸೀನಿ,]....ಇದೇನಂದ್ರೆ ಇಷ್ಟು ಘಾಟೂ ? !........[ಎನ್ನುತ್ತ ಚೀಲದಲ್ಲಿ ನೋಡಿ,]....ಓಹೋ ಮೆಣಸಿನ ಕಾಯಿ ಗಡಂಗ್ ಇಕ್ಸ್ಪೆರ್ಕ್ಷ ನಡೆದಿದೇ! ........ಒಳಗಿಟ್ಟು ಬರ್ತೀನಿ ಮೊದ್ಲು !....[ಚೀಲವನ್ನು (ಇ) ಬಾಗಿಲ ಬಳಿ ಇಟ್ಟು ಬರಲು ಹೋಗುವಳು.]

ತ್ರಿಪುರಾಂತಕಯ್ಯ : ಅಬ್ಬ ! ಎಷ್ಟು ಬಿಸ್ಲು ಹೊರಗೆ!....[ಎನ್ನುತ್ತ ಹ್ಯಾಟು, ಚೆತ್ರ, ಕೋಟುಗಳನ್ನು (ಯ) ನಿಲುವಿಗೆ ಹಾಕುತ್ತ,]........ಮೊದಲು ಸ್ನಾನಮಾಡಿಬಿಡಬೇಕು !

ಸುಮುಕೋಮಲ : [ಚೀಲವನ್ನು (ಇ) ಬಾಗಿಲ ಬಳಿ ಇಟ್ಟು ಬಂದು (ಟ) ಕುರ್ಚಿಯಲ್ಲಿ ಕುಳಿತು,]................ಏನಾದ್ರೂ ಹೇಳೀಂದ್ರೇ ಬಜಾರ್ ಸಮಾಚಾರಾ !

ತ್ರಿಪುರಾಂತಕಯ್ಯ : ಬಜಾರ್ ಸಮಾಚಾರಾ ಹಾಗಿರ್ಲೀ,............ [ಕೈ ಗಡಿಯಾರ ನೋಡಿಕೊಂಡು,]....ಓಹೋ, ತುಂಬಾ ಹೊತ್ತಾಗಿಬಿಟ್ಟದೆ! ಏಳು, ಊಟಾ ಮಾಡ್ತಾ ಮಾತಾಡೋಣ. ಇಬ್ರೂ ಒಟ್ಟಿಗೇ ಕೂತು ಬಿಡೋಣ ಊಟಕ್ಕೆ !—ಟೇಬಲ್ ಮಿಲ್ ! ಆಂ ? !........ಎಲ್ಲಾ ಸಿದ್ಧಾಮಾಡು. ಅಷ್ಠೊತ್ತಿಗೆ ನಾನ್ಹೋಗಿ ಜಾಗ್ರತೆ ಎರಡು ತಂಬಿಗೆ

ಸ್ನಾನಾ ಮಾಡ್ಕೊಂಡು ಬಂದ್ಬಿಡ್ತೀನಿ. [ಎನ್ನುತ್ತ ಟವಲುಗಳನ್ನು ತೆಗೆದು ಕೊಂಡು (ಉ) ಬಾಗಿಲ ಬಳಿಗೆ ಹೋಗುತ್ತ,]........ಎಷ್ಟೊತ್ತು ಮಹಾ— ಒಂದೇ ನಿಮ್ಷ!....[(ಉ) ಬಾಗಿಲ ಬಳಿ ನಿಂತು, ಒಳಕ್ಕೆ ಬಾಗಿ ನೋಡಿ, ಹುಬ್ಬು ಮೇಲಕ್ಕೆತ್ತಿ, ಗಟ್ಟಿಯಾಗಿ :]....ಆಂ?! ಇದೇನ್ ನೀರೇ ಕಾಯಿಸಿ ದ್ಹಾಗಿಲ್ಲಾ ಹಂಡೇಲೀ!?....[ಎನ್ನುತ್ತ ಮರಳಿ ಮಧ್ಯ ರಂಗಕ್ಕೆ ಬರುವನು.]

ಸುಮುಕೋಮಲ: [ನಿರ್ಯೋಚನೆಯಾಗಿ,] ಈ ಸೆಖೇಲೂ ಬಿಸಿ ನೀರಾಗಬೇಕೇನಂದ್ರೇ?....ಹಾಯಾಗಿ ಥಣ್‌ಗಿರುತ್ತೆ—ನಲ್ಲೀ ಕೆಳಗೆ!

ತ್ರಿಪುರಾಂತಕಯ್ಯ: ನಲ್ಲೀ ಕೆಳಗೇ!?....[ಅನುಮಾನದಿಂದ, ತನ್ನಲ್ಲಿ] ....ಅಡಿಗೆನಾದ್ರೂ....[ಎನ್ನುತ್ತ (ಇ) ಬಾಗಿಲ ಬಳಿಗೆ ಹೋಗಿ, ಒಳಕ್ಕೆ ಬಾಗಿ ನೋಡಿ, ಹುಬ್ಬು ಮೇಲಕ್ಕೆತ್ತಿ, ಗಟ್ಟಿಯಾಗಿ:] ಬೆಂಕೀನೇ ಹಾಕಿಲ್ವಲ್ಲೇ ಒಲೆಗೇ!!....[ತನ್ನುತ್ತ ಬಂದು, (ಚ) ಕುರ್ಚಿಗೆ ನಿಂತುಕೊಂಡು, ಅವಳ ಮುಖವನ್ನು ದುರುದುರು ನೋಡುವನು.]

ಸುಮುಕೋಮಲ [ಬೆರಳು ಬಾಯಮೇಲಿಟ್ಟುಕೊಂಡು ವೈಯಾರದಿಂದ ಓರೆ ನೋಟದಲ್ಲಿ:]....ಆಹ್!....[ಎಂದು ಆಕಳಿಸಿ, ಮೇಜಿನ ಮೇಲಿರುವ ಬೀಸಣಿಗೆ ತೆಗೆದುಕೊಂಡು ಮೆಲ್ಲಗೆ ಸೋಖಿಕೊಳ್ಳಲಾರಂಭಿಸುವಳು.]

ತ್ರಿಪುರಾಂತಕಯ್ಯ: ಏನೇ ಇದೂ!?...........ಮನೇಲಿ ಅಡಿಗೇ, ಊಟಾ, ಎಲ್ಲಾ ಕೈಬಿಟ್ಟು, ಬಜಾರ್ ಸಮಾಚಾರಾ ಕೇಳ್ತೀಯಲ್ಲಾ ನಿರ್ಯೋಚನೆಯಾಗೀ!

ಸುಮುಕೋಮಲ: [ಬೇಸರದಿಂದ] ಅಯ್ಯೋ ಹೋಗೀಂದ್ರೆ, ಯಾರ ಕೈಲಾಗುತ್ತೆ—ಒಂದೇ ಸಮನಾಗಿ ದಿನಾ ಹತ್ತು ಘಂಟೆಗೆ ಊಟಾ ಮಾಡೀ ಮಾಡೀ ಬ್ಬೇಜಾರು!

ತ್ರಿಪುರಾಂತಕಯ್ಯ: ಹತ್ತು ಘಂಟೇ!?....[ಕೈ ಗಡಿಯಾರ ತೋರಿಸುತ್ತ,]....ಹನ್ನೆರಡೂವರೇ ಕಾಣೇ ಈಗಾ!

ಸುಮುಕೋಮಲ: ಭಾನ್ವಾರಾನೂ ಗಡ್ಯಾರ ನೋಡ್ಬೇಕೇನಂದ್ರೆ?

ತ್ರಿಪುರಾಂತಕಯ್ಯ: ಗಡಿಯಾರ ನೋಡದೇ ಇದ್ರೆ ಹೋಗ್ಲಿ, ಊಟಾನೂ ಮಾಡಬೇಡ್ವೇ?....ಈಗ ನಿನ್ನ ಉದ್ದೇಶ್ವಾದ್ರೂ ಏನೂಂ ತೀನಿ!?

ಸುಮಕೋಮಲ : ಹೋಟ್ಲೆಗ್ಹೋಗೀ, ಒಂದಿಷ್ಟು ತಿಂಡೀ ತಕೊಂಡ್ಬನ್ನಿ.

ತ್ರಿಪುರಾಂತಕಯ್ಯ : ಹೊಟ್ಲ್ ತಿಂಡೀ ! ?.... ಚನ್ನಾಯ್ತು !

ಸುಮಕೋಮಲ : ಚನ್ನಾಗಿರದೆ ಉಂಟೇ ಹೋಟ್ಲ್ ತಿಂಡೀ ! ? ....ಹಾಗೇ ಅಲ್ಲೇ ಬಿಸಿ ನೀರು ಸ್ನಾನಾ ಮಾಡ್ಕೊಂಡೂ, ಎರಡೂಟಕ್ಹೇಳಿ ಬನ್ನಿ....ಎರಡು ಘಂಟೇ ಮೇಲೆ ಹೋಟ್ಲೆಲ್ಲಿ ಗಲಾಟೇ ಇರೋದಿಲ್ಲಾ—ಇಬ್ರೂ ಹೋಗಿ ಊಟಾ ಮಾಡ್ಕೊಂಡ್ಬರೋಣಾ.

ತ್ರಿಪುರಾಂತಕಯ್ಯ : [ಹತಾಶನಾಗಿ ಕುಳಿತು (ಚ),]....ಹುಂ !........ ಸ್ಸರೀ ಹಾಗಾದ್ರೆ !....ಆಮೇಲೆ ?

ಸುಮಕೋಮಲ : ಆಮೇಲೆ ಪೇಟೇಗ್ಹೋಗಿ ಸೀರೇ ನೋಡ್ಕೊಂಡ್ಬಂದು, ಅದನ್ನುಟ್ಕೊಂಡು ಸಿನಿಮಾಕ್ಹೋಗೋದು !....ಸೀರೇ ತರ್ತೀನೀಂತ ಆಗ್ಲೇ ಒಪ್ಕೊಂಡಿದ್ದೀರಲ್ಲ ನೀವು !....ಅಷ್ಟೇ ಈ ಭಾನ್ವಾರದ ಪ್ರೋಗ್ರಾಂ !

ತ್ರಿಪುರಾಂತಕಯ್ಯ : ಅಪೀಲೇ ಇಲ್ಲಾ ಬಿಡು !....ಬರ್ತಾ ಬರ್ತಾ ನೀನ್ಯಾಕೋ,...............

ಸುಮಕೋಮಲ : ಮಧ್ಯೇ ಮಧ್ಯೇ ಒಂದೊಂದಿವ್ಸ ಹೀಗ್ಮಾಡಿದರೆ ತಾನೆ ತಪ್ಪೇನೂಂದ್ರೆ ?—ವಿನೋದ್ವಾಗಿರುತ್ತೆ ! ದಿನಾ ಒಂದೇ ಸಮನಾಗಿರಬೇಕೇನು ? ಆಗಾಗ ಸ್ವಲ್ಪ ಹಾಗೆ ಬದ್ಲಾವಣೆ ಮಾಡ್ತಾ ಇದ್ರೇನೇ ಚನ್ನಾಗಿರೋದು !

ತ್ರಿಪುರಾಂತಕಯ್ಯ : ಹ್ದೀಗೆ ಮುರಾಡಾ ಹಾಕಿದರೆ ಏನು ಮಾಡೋದು ? ....ಹುಂ. ತಿರಿಗೀ ನಿನ್ ಸಂಗ್ಡಾ ಯಾರು ಜಗಳಾ ಆಡೋರು ಈಗ ?.....ಆಯ್ತೇಳು, ಹಾಗೇ ಮಾಡೋಣ, ಏನೀಗ ?

ಸುಮಕೋಮಲ : ಹೋಗ್ಬಿಟ್ಬನ್ನೀ ಮತ್ತೆ ಹೋಟ್ಲೆಗೆ.....[ಕಾಲುಚೀಲ ಹಾಕತೊಡಗುವಳು.]

ತ್ರಿಪುರಾಂತಕಯ್ಯ : ತ್ಹಾಳು, ಈಗ್ಲಾನೇ ಬಂದಿದೀನೀ, ಸ್ವಲ್ಪ ಹಾಗೆ ಸುಧಾರಿಸ್ಕೊಂಡು ಹೋಗಿಬರ್ತೀನಿ......[ಬೀಸಣಿಗೆ ತೆಗೆದುಕೊಂಡು, ಆರಾಮುಕುರ್ಚಿಯಲ್ಲಿ ದಿಂಬಿಗೆ ಒರಗಿಕೊಂಡು ಕುಳಿತುಕೊಳ್ಳುವನು.] .....ಅದೇನು

ಫುಟ್ ಕಾಲ್ಚೀಲಾ ಹಾಕ್ತಾ ಇರೋಹಾಗಿದೇ !........[ಕಿರುನಗೆಯಿಂದ] ಮುಂದಾಗೋದಕ್ಕೆ ಸಿದ್ಧತೇನೋ ಈಗ್ನಿಂದಾ ?! ಆಗ್ಲಿ ಆಗ್ಲಿ....

ಸುಮಕೋಮಲ : [ನಾಚುತ್ತ, ಕಿರುನಗೆಯೊಡನೆ].... ಹೋಗೀಂದ್ರೆ ! ....ಹಾಕೋದು ಕಲ್ತುಕೊಳ್ಳೋಣಾಂತ ನಾನು ಫುಟ್ಟೆದ್ಹಾಕ್ತಾ ಇದ್ರೇ, ಏನೇನೋ ಅಂತೀರಿ !

ತ್ರಿಪುರಾಂತಕಯ್ಯ : ಪುಟ್ಟೆದೂ ಬೇಕಾಗಬಹುದೂಂದೆ, ಅಷ್ಟೆ !.... ಹೋಗ್ಲೀ, ಈಗ ತಮಾಷೆಯಾಗಿ ಒಂದಾಟಾ ಕೇರಂ ಆದ್ರೂ ಆಡೋಣ್ವೆ ಸ್ವಲ್ಪಾ ಹೊತ್ತೂ ?

ಸುಮಕೋಮಲ : ನಾ ಬರೋಲ್ಲ ಕೇರಂಗೆ—ನೀವು ಭಂಡಾ ಆಡ್ತೀರಿ.

ತ್ರಿಪುರಾಂತಕಯ್ಯ : ನಾನು ಭಂಡಾ ಅಡ್ತೀನೋ, ನೀನು ಭಂಡಾ ಆಡ್ತಿಯೋ ? ಈಗ ಮನೇ ಕೆಲಸದಲ್ಲಿ ಭಂಡಾ ಆಡ್ತಾ ಇರೋರ್‍ಯಾರು ? ..........ಆಯ್ತು, ಇನ್ನೇನಾದ್ರೂ ಹೇಳು—ಹೊತ್ಹೋಗೋದಕ್ಕೊಂದು ಹವ್ಯಾಸ.

ಸುಮಕೋಮಲ : ಹಾಗಾದ್ರೇ,.....ನಾ ಒಂದ್ಹೇಳ್ತೀನಿ ಕೇಳ್ತೀರಾ ?

ತ್ರಿಪುರಾಂತಕಯ್ಯ : ಹೇಳ್ತಾ ಹೋದ್ರೆ ಕಿವೀಲಿ ಬೀಳುತ್ತಲ್ಲ ತಾನಾಗೀ !

ಸುಮಕೋಮಲ : ಅಲ್ಲಾಂದ್ರೇ, [ಹುಬ್ಬು ಗಂಟಿಟ್ಟುಕೊಂಡು ಉದ್ವೇಗ ದಿಂದ ಬೇಗ ಬೇಗ ಕಾಲುಚೀಲ ಹಾಕುವಳು.]

ತ್ರಿಪುರಾಂತಕಯ್ಯ : ಹೌದೂಂದ್ರೇ,.....ಊಂ, ಎನ್ಹೇಳೂ,

ಸುಮಕೋಮಲ : [ಕಾಲುಚೀಲ ಹಾಕುವುದನ್ನು ನಿಲ್ಲಿಸಿ,] ಅಲ್ಲಾ, ಈಕೀ ಅವಾಂತ್ರಾ ತುಂಬಾ ಆಗಿಬಿಟ್ಟೆದೇಂದ್ರೆ, ನಿಭಾಯ್ಸೋದೇ ಸಾಧ್ಯ ವಿಲ್ಲ. ಏನಾದ್ರೂ ಮಾಡೋಣಾ ಬರ್ತೀರಾ ?

ತ್ರಿಪುರಾಂತಕಯ್ಯ : ಯ್ಯಾರವಾಂತ್ರ ?

ಸುಮಕೋಮಲ : [ಕಣ್ಣು ಮಿಂಚುತ್ತಿರಲು,]....ಅಲ್ಲಾ, ಈಕೀಗ್ಯಾಕೆ ನಮ್ಮ ಸುದ್ದೀಂತೀನಿ.....[ಮೂತಿ ಉದ್ದಕ್ಕೆ ಮಾಡಿಕೊಂಡು,]......ಏನೋ, ನಮ್ಮನೇಲಿ ಮಾತು ಬರುತ್ತೆ, ಮಾತು ಹೋಗುತ್ತೆ......ಅದನ್ನ ಬೆಳಸಿ

ಬೆಟ್ಟದಷ್ಟು ಮಾಡಿ, ಈಕೀ ಯಾಕೆ ಎಲ್ರ ಮುಂದೂ ನಮ್ಮನ್ನು ಹಂಗ್ಸೋದೂ ?..... [ಮತ್ತೆ ಕಾಲುಚೀಲ ಹಾಕುವಳು.]

ತ್ರಿಪುರಾಂತಕಯ್ಯ : ಹಂಗ್ಸಿರೋರು ಯಾರೂ, ಹಂಗ್ಸಿರೋದೇನಂತಾ ?—ಹೇಳು ಸರಿಯಾಗೀ.

ಸುಮಕೋಮಲ : [ಕಾಲುಚೀಲ ಹಾಕುವುದನ್ನು ನಿಲ್ಲಿಸಿ,]....ಅಬ್ಬಬ್ಬ ! ......ಮತ್ನೋಡಿದರೆ ಬಾಯಲ್ಲಿ ಬೆರಳಿಟ್ರೆ ಕಚ್ಕೋಕೆ ಬಾರದೆ ಮಳ್ಳೀ ಹಾಗಿದಾಳೆ !..... [ಮತ್ತೆ ಕಾಲುಚೀಲ ಹಾಕುವಳು.]

ತ್ರಿಪುರಾಂತಕಯ್ಯ : ಎಲೆ !......ಯ್ಯಾರು, ಹೇಳಬಾರದೇ ?

ಸುಮಕೋಮಲ : [ಕಾಲುಚೀಲ ಹಾಕುವುದನ್ನು ನಿಲ್ಲಿಸಿ, ಹುಬ್ಬುಮೇಲಕ್ಕೆ ಮಾಡಿಕೊಂಡು, ತಲೆ ಸ್ವಲ್ಪ ಅಲ್ಲಾಡಿಸುತ್ತ,]..........ನೋಡೋಕ್ಹಾಗಿದ್ರೂ ಎಷ್ಟಿದೇಂತೀರೀ ಆಕೀ ಹತ್ರಾ !........[ಬೇಗ ಬೇಗ ಕಾಲುಚೀಲ ಹಾಕುವಳು.]

ತ್ರಿಪುರಾಂತಕಯ್ಯ : ಯ್ಯಾಕೀ ಹತ್ರಲೇ ? !

ಸುಮಕೋಮಲ : ಆಕೀ ಹತ್ರಲೇ,..... ಇನ್ಯಾರ್ಹತ್ರ ? !

ತ್ರಿಪುರಾಂತಕಯ್ಯ : ಅರ್ರೆ !

ಸುಮಕೋಮಲ : ಲಕ್ಷಮ್ಮತ್ತಿಗೇ ಹತ್ರ !—ಅಷ್ಟುಗೊತ್ತಾಗೋದಿಲ್ವೆ ?......[ಎಂದು, ಹಾಕಿರುವ ಕಾಲುಚೀಲವನ್ನು ಸರ್ರನೆ ದಾರ ಎಳೆದು ಎರಡು ಸಾಲು ಬಿಚ್ಚುವಳು.]

ತ್ರಿಪುರಾಂತಕಯ್ಯ : [ಥಟ್ಟನೆ ನೆಟ್ಟಗೆ ಕುಳಿತು, ಆಸಕ್ತನಾಗಿ.]...... ..... ಓಹೋ, ಅತ್ತಿಗೇ ಹತ್ರಲೋ ?.... ......ನಾನೂ ಆಗ್ಲೇ ಊಹಿಸ್ದೇ !...... ಏನೋ ಇದೇ ಸ್ವಾರಸ್ಯಾ ! ! ಹೇಳು ಹಾಗಾದ್ರೆ ಸ್ವಲ್ಪ ವಿಶದ್ವಾಗಿ—ಅತ್ತಿಗೇ ಸುದ್ದಿ !......ಹೋದ ಭಾನ್ವಾರ ಆಕೀ ಕಥೇ ಪುಸ್ತಕಕ್ಹೇಳಿಕಳಿಸಿದ್ದಾಗ, ನೀನು ಇಂಗ್ಲಿಷ್ ಪುಸ್ತಕ ಕಳಿಸಿಕೊಟ್ಟಿದ್ಯಲ್ಲ ?......

ಸುಮಕೋಮಲ : [ಕಣ್ಣರಳಿಸಿ,] ನನಗೇನು ಗೊತ್ತು, ಆಕೀ ಗಿಂಗ್ಲೀಷ್ ಬರೋಲ್ಲಾಂತಾ ? !......[ತಲೆ ಸ್ವಲ್ಪ ಆಡಿಸುತ್ತಾ,] ನೀವೂ ಒಳ್ಳೇವ್ರೇ ಏನಾದ್ರೂ ಆಗ್ಲಿ !......ಆ ಸುದ್ದೀ ಅಲ್ಲ ಇದು.

ತ್ರಿಪುರಾಂತಕಯ್ಯ : ಅದಕ್ಕೆ ಸಂಬಂಧಪಟ್ಟಿದ್ದಲ್ವೋ ?..... ........... ಮತ್ತಿನ್ನೇನೂ ?

ಸುಮುಕೋಮಲ: ಮೊನ್ನೇ ಸಾಯಂಕಾಲ ನೀವೇನೋ ಸ್ವಲ್ಪ ಕೂಗಾಡಿದಿರಲ್ಲ, ಮನೇಲಿ,................

ತ್ರಿಪುರಾಂತಕಯ್ಯ: [ಮೆಲ್ಲನೆ ತಲೆದೂಗುತ್ತ,]....ಹೂಂ........

ಸುಮುಕೋಮಲ: ಅದೆಲ್ಲೋ ಆಕೀ ಕಿವೀಲಿ ಬಿದ್ದಿದೆ....

ತ್ರಿಪುರಾಂತಕಯ್ಯ: ಬಿದ್ದಿರಬಹುದು! ಅಕ್ಕಪಕ್ಕದ ಮನೆಗ್ಳು— ಇಲ್ಲಿ ಗಟ್ಯಾಗಿ ಮಾತಾಹಿಡಿದರೆ ಅಲ್ಲೀಕ್ಕೇಳ್ಸುತ್ತೆ, ಅಲ್ಲಿ ಗಟ್ಯಾಗಿ ಮಾತಾಡಿದರೆ ಇಲ್ಲೀಕ್ಕೇಳ್ಸುತ್ತೆ!......ಮೊನ್ನೇ ಸಾಯಂಕಾಲ ನೀನೇ ಸುಮ್ನೆ ರೇಗಿಸಿ ಬಿಟ್ಟೆ ನನ್ನಾ!

ಸುಮುಕೋಮಲ: ನಾನೇ?!

ತ್ರಿಪುರಾಂತಕಯ್ಯ: ಮತ್ತಿನ್ಯಾರು?..........ಸಾಯಂಕಾಲ ತುರ್ತಾಗಿ ಎಲ್ಲೋ ಹೊರಕ್ಹೋಗಬೇಕೂಂತ ನಾನು ಸೈಕಲ್ ಅಣೀ ಮಾಡಿಟ್ಕೊಂಡಿದ್ರೆ, ಅದರ ವಾಲ್ವ್‌ಟ್ಯೂಬ್ ಕಿತ್ತಾಕ್ಲಿಲ್ವೇ ನೀನೂ?.....ಒಂದೊಂದಲ್ಲ ನೀ ಮಾಡೋದು!

ಸುಮುಕೋಮಲ: ಅಧ್ಯಾಗಾದ್ರೂ ಇರಲೀ—ಅದು ನಮ್ ನಮ್ ಮಾತಾಯ್ತು! ಆದ್ರೆ ಈ ಲಕ್ಷಮ್ಮತ್ತಿಗೆ ನಿನ್ನೇಯಿಂದಾ ಒಂದೇಸಮನಾಗಿ ಅದೇ ರಾಗಾ ಹಾಡ್ತಾ ಇದಾಳಂತೆ—ನಮ್ಮತ್ರನೇ ಒಕ್ಕಲುಗಿತ್ತೀ ಮುಂದೆ—[ಅಣಕಿಸುವಂತೆ]...."ಯಾಕೇ ಚಿಕ್ಕೀ, ಹಾಗೆ ಜಗಳಾಡಿವರು ಅವರು ಗಂಡಾ ಹೆಂಡ್ತೀ? ಹಾಗೇ, ಹೀಗೇ" ಅಂತ!...ಈ ಹೊತ್ತು ಬೆಳಗ್ಗೆ ಹೇಳಿದ್ಲು ಚಿಕ್ಕಿ ಎಲ್ಲಾ!

ತ್ರಿಪುರಾಂತಕಯ್ಯ: ಲೋಕಾಭಿರಾಮನಾಗಿ ಏನೋ ಅಂದಿರಬಹುದೂ, ಅದು ನಿನ್ನ ಕಿವೀಲಿ ಹ್ಯಾಗೋ ಬಿದ್ದಿರಬಹುದೂ!

ಸುಮುಕೋಮಲ: ಅಷ್ಟೇ ಆಲ್ಲಾಂದ್ರೇ!....ನಾವೀವೂರಿಗೆ ವರ್ಗಾ ಆಗಿ ಬಂದು ಇಪ್ಪದ್ದಿವ್ಸ ಆಯ್ತಿಲ್ಲ,..........

ತ್ರಿಪುರಾಂತಕಯ್ಯ: ಆಗ್ಲೇ ಇಪ್ಪದ್ದಿವ್ಸ ಆಯ್ತಲ್ವೇ ನಾವು ಹಿಂದ್ಲೂರಿಂದಾ ಬಂದು—ಈ ಮುಂದ್ಲೂರಿಗೆ!?

ಸುಮುಕೋಮಲ: ಮುಂದ್ಲೂರಿಗೆ ಬಂದ ಈ ಇಪ್ಪುದಿವ್ಸದಲ್ಲೇ ಮೂವತ್ತು ಸಲ ಜಗಳ ಆಡಿದೇವಂತೆ ನಾವಿಬ್ರೂ!

ತ್ರಿಪುರಾಂತಕಯ್ಯ : ಅಲ್ಲೀಗೆ ದಿನಕ್ಕೊಂದೂವರೆ ಸಲ ಆದ್ಹಾಗಾಯ್ತು !

ಸುಮುಕೋಮಲ : ಹಾಗಂತಾ ಲೆಕ್ಕಾ ಹೇಳಿದಾಳಾಕಿ—ಚಿಕ್ಕೀ ಮುಂದೆ !.........ಆಮೇಲೆ, ... .....ಇಗೋ ನನ್ನ ಮುಂಗೈ ಮೇಲೆ ಸ್ವಲ್ಪ ಗಾಯ ಆಗಿದ್ಯಲ್ಲ........—"ಇದೇನಮ್ಮ ?" ಅಂತ ಪೃಚ್ಛೇ ಬೇರೇ ಈಕೀದು !..........."ರೋಜಾಗಿಡ ತಾಕಿದ್ದು" ಅಂತ ಚಿಕ್ಕೀ ಹೇಳಿದರೆ "ಯ್ಯಾಕಾದೀತು, ಬೆತ್ತಾ ತಾಕಿದ್ದಿರಬೇಕು" ಅಂತ ಅಂದ್ಲಂತೆ ಲಕ್ಷ್ಮ್ಯತ್ತಿಗೆ !

ತ್ರಿಪುರಾಂತಕಯ್ಯ : ..........ಹಾಗಾದ್ರೇ, ಒಂದು ಕೆಲಸಾ ಮಾಡು: ನಿಮ್ಮತ್ತಿಗೆ ನಿಮ್ಮಣ್ಣನ ಸಂಗಡ ಜಗಳ ಆಡಿದಾಗ, ಅವರ ಮನೇ ಒಕ್ಕಲುಗಿತ್ತೀ ಮುಂದೆ ನೀನೂ ಹಂಗ್ಸಿಬಿಡು !—ಅಲ್ಲೀಗೆ ಸರಿ! ಹೋಗುತ್ತೆ!

ಸುಮುಕೋಮಲ : ಅಹ, ಅವರು ಗಂಡಾ ಹೆಂಡ್ತೀ ಮಾತ್ರಾ ಭಾಳಾ ಸಂಪನ್ರಂತೆ, ಎಂದೂ ಜಗಳಾನೇ ಆಡೋದಿಲ್ವಂತೆ !—ಅದ್ ಬೇರೆ ಹೇಳ್ಕೋತಾಳೆ ಜಂಭ !

ತ್ರಿಪುರಾಂತಕಯ್ಯ : ಎಂದೂ ಜಗಳಾನೇ ಆಡೋದಿಲ್ಲಾನ್ನೋ ಮಾತು ನಂಬೋದಕ್ಕಾಗೋದಿಲ್ಲಾ ಬಿಡು !........ಒಪ್ಪಾ ಇಟ್ಕೊಕೋಭೋದು, ಅಷ್ಟೇ !—ಆದ್ರೆ ಸಂಸಾರಾ ಅಂದ್ಮೇಲೆ, ಒಂದಲ್ಲಾ ಒಂದಿನ್ನ ಏನಾದ್ರೂ ಬಂದೇ ಬರುತ್ತೆ ಕಲಹ ! ....ಕೇಳಿದ್ದೀಯೋ ಇಲ್ವೋ ವೇದವಾಕ್ಯಾ : ಎಲ್ಲಾರ ಮನೇ ದೋಸೇನೂ ತೂತೇ !

ಸುಮುಕೋಮಲ : ಆದ್ರೂನೂ, ಅವರೆಂದೂ ಜಗಳಾನೇ ಆಡಿಲ್ವಲ್ಲಾಂದ್ರೆ ನಾವು ಕಂಡ್ಹಾಗೆ ! ಸೋಜಿಗ ಅಲ್ವೆ ?....ಈವೂರಲ್ಲೂ ಎಲ್ರೂ ಹಾಗೇ ಹೇಳ್ತಾರೆ : "ಅವರು ಗಂಡಾಹೆಂಡ್ತಿ ಜಗಳ ಆಡೋದೇ ಇಲ್ಲಾ, ಅದೊಂದು ಸೋಜಿಗ" ಅಂತ !....ಇದ್ದರೂ ಇರಭೋದೂ !—Every rule has an exception ಅನ್ನೋದೂ ವೇದದ್ದೇ ತಾನೇ ವಾಕ್ಯ !

ತ್ರಿಪುರಾಂತಕಯ್ಯ : ....ಏನೋ ! ನಿಮ್ಮಣ್ಣ ಶಾಂತಪತಯ್ಯ

ಅನ್ನೋ ಹೆಸರಿಗೆ ತಕ್ಕಾಗೇ ಇರಭೋದು—ಶಾಂತವಾಗಿ!

ಸುಮುಕೋಮಲ : ಅದಕ್ಕೇ ಲಕ್ಷ್ಮಮ್ಮತ್ತಿಗೆ ಅಷ್ಟು ಜಂಭಾ ಕೊಚ್ಕೊಳ್ಳೋದು!—"ಜಗಳ ಆಡೋದ್ಹಾಗಿರಲಿ, ನಮ್ಮೋರು ಗಟ್ಯಾಗಿ ಒಂದು ಮಾತು ಸಹ ಆಡೋವ್ರಲ್ಲ ಅಂತ ಘಳಿಗ್ಗೆ ಇಪ್ಪತ್ತು ಸಲ ಅಂತಾಳಂತೆ!....ನಿಮ್ಮಣ್ಣ ಹಂಗ್ಸೋ ಮಾತಾಗ್ಲಿಲ್ವೇಂದ್ರೆ ಅದೂ?

ತ್ರಿಪುರಾಂತಕಯ್ಯ : ಹೌದು ಹೌದು! ......ಇಷ್ಟೆಲ್ಲಾ ಬೆಳೆದಿದ್ಯೇ ಮಾತೂ?!.....ಅಲ್ಲಾ, ಹಿಂದಿನಿಂದ್ಲೂ ಸತ್ಯಭಾಮಾ—ಶ್ರೀಕೃಷ್ಣ, ಪಾರ್ವತೀ—ಪರಮೇಶ್ವರ, ಮುಂತಾದೋವ್ರೆಲ್ಲಾ ಮೇಲ್ಪಂಕ್ತೀ ಹಾಕ್ಕೊಟ್ಟಿರೋ ಹಾಗೆ, ಪ್ರಪಂಚದಲ್ಲಿ ಎಲ್ಲಾ ಗಂಡಾ ಹೆಂಡ್ತೀನೂ ಒಂದಿನಾಲ್ಲಾ ಒಂದಿನ ಜಗಳ ಆಡ್ತಾ ಇರೋವಾಗಾ, ಈ ಲಕ್ಷಮ್ಮ—ಶಾಂತಪತಯ್ಯ ಇವ್ರಿಗೇಕೇ ಜಂಭಾಂತೀನಿ?!

ಸುಮುಕೋಮಲ : ನೋಡೀ ನೀವೆ! ಇವರಷ್ಟೀಗೇ ಬಿಟ್ರೇ, ಈ ಲಕ್ಷ್ಮಮ್ಮತ್ತಿಗೆ ಬಾಯಲ್ಲಿ ನಮುಗೆ ಉಳಿಬಾಳೇ ಇಲ್ಲಾಂದ್ರೇ!

ತ್ರಿಪುರಾಂತಕಯ್ಯ : ಹಾಗಾದ್ರೆ ಈಗೇನಾದ್ರೂ ಮಾಡಿ ಅವರಿಬ್ಬರ ಮಧ್ಯೆ ಒಂದು ಜಗಳ ತಂದ್ಹಾಕಿಬಿಡೋಣ್ವೇನೂ? ಆಡಿಕೊಳ್ಳಿ ಪಾಪ!

ಸುಮುಕೋಮಲ : ಅಷ್ಟು ಮಾತ್ರಾ ಮಾಡಿದರೆ, ಸಧ್ಯ ಈ ಲಕ್ಷ್ಮಮ್ಮತ್ತಿಗೆ ಅವಾಂತ್ರ ಸ್ವಲ್ಪ ಅಡಗುತ್ತೇಂದ್ರೆ!

ತ್ರಿಪುರಾಂತಕಯ್ಯ : ಸರಿ ಹಾಗಾದ್ರೆ ಹೊತ್ಹೋಗೋದಕ್ಕೆ ಒಳ್ಳೇ ಹವ್ಯಾಸಾನೇ ಸಿಕ್ಕಿದ್ಹಾಗಾಯ್ತು ಬಿಡು!....ಈಗ ಮುಖ್ಯವಾಗಿ ಮಾಡಬೇಕಾಗಿರೋದೇನೂ? ಏನಾದ್ರೂ ಪಿತೂರೀ ನಡೆಸಿ, ಈ ಸಾಯಂಕಾಲದೊಳಗಾಗಿ ನಿಮ್ಮತ್ತಿಗ್ಗೂ ನಿಮ್ಮಣ್ಣನಿಗೂ ಜಟಾಪಟೀ ಬೀಳೋಹಾಗೆ ಮಾಡಬೇಕು!—ಅಷ್ಟೇ ತಾನೇ?

ಸುಮುಕೋಮಲ : ಆದ್ರೆ ಅದು ಅಷ್ಟು ಸುಲಭ ಅಲ್ಲಾಂದ್ರೇ.... ಅವರು ಒಬ್ರನ್ನೊಬ್ರು ಅನುಸರಿಸ್ಕೊಂಡ್ಹೋಗ್ತಾರೆ. ಒಂದ್ವೇಳೆ ನ್ಹಾವಿಬ್ರೂ ಜಗಳಾಡೋದು ಕೈಬಿಟ್ರೂ ಬಿಡಬಹುದು, ಆದ್ರೆ ಅವರಿಗೆ ಜಗಳಾ ಹಚ್ಚೋದೂ—ಅಷ್ಟು ಸುಲಭ ಅಲ್ಲ!

ತ್ರಿಪುರಾಂತಕಯ್ಯ : ನ್ಹಾವು ಜಗಳ ಬಿಟ್ಟೇಬಿಡೋದೂಂದ್ರೇ,—

ಏನು ಹ್ಯಾಗ್ಬೇಳೋಕಾಗುತ್ತೆ?.... ಹಾಗೂ ನೀ ಹೇಳೋ ಹಾಗೆ 'ಮಧ್ಯೇ ಮಧ್ಯೇ' ಸ್ವಲ್ಪ ಹಾಗೆ ಜಗಳ ಆಡ್ತಾ ಇದ್ರೇನೇ ಜೀವನ ದಲ್ಲಿ ಸ್ವಾರಸ್ಯ! ಜಗಳಾನೇ ಕೈಬಿಟ್ರೆ ಜೀವನಾನ್ನೋದು ಜಡವಾಗ್ತಾ ಹೋಗುತ್ತೆ—ಗಾಣದೆತ್ತಿನ ಹಾಗೆ! ಜಗಳವಿಲ್ಲದ ಜೀವನ, ಸಪ್ಪೆ ಸಾರೂ ಅನ್ನ, ಎರಡೂ ಒಂದೇ!....ಈಗ ನಿಮ್ಮಣ್ಣ ಅತ್ತಿಗೆ ಜಗಳ ಆಡದೇ ಇರೋದಕ್ಕಾದರೂ ಇಷ್ಟೇ ಕಾರಣ: ಅವರಿಗೆ ಜಗಳದ ಸ್ವಾರಸ್ಯಾ ಗೊತ್ತಾಗಿಲ್ಲ! ಆ ಸ್ವಾರಸ್ಯ ಅವರಿಗೆ ಯಾವಾಗ್ಗೊತ್ತಾ ಗುತ್ತೋ, ಆ ಕ್ಷಣವೇ ಜಗಳ ಪ್ರಾರಂಭಾ ಮಾಡ್ತಾರೆ, ಆಮೇಲೆ ಬೇಡಾಂದ್ರೂ ಬಿಡೋದಿಲ್ಲ!—ಅಷ್ಟೇ ನೋಡು ಅದರ ಅಂತರ್ಯ!

ಸುಮುಕೋಮಲ: ಹಾಗಾದ್ರೆ ಜಗಳದ ಸ್ವಾರಸ್ಯಾ ಹ್ಯಾಗ್ಗೊತ್ತಾ ಗ್ಬೋದು ಅವರಿಗೇ?

ತ್ರಿಪುರಾಂತಕಯ್ಯ: ಏನಾದ್ರೂ ಇಡಬೇಕು ಮೆಣಸಿನ ಕಾಯಿ ಘಾಟು!....ಏನಿಡೋಣಾ? ...ನೀನೂ ಯೋಚ್ನೆ ಮಾಡು, ನಾನೂ ಯೋಚ್ನೆ ಮಾಡ್ತೀನಿ.

ಸುಮುಕೋಮಲ: ಏನ್ಮಾಡೋಣಾ!....

[ಇಬ್ಬರೂ ಮೂಗಿನ ಮುಂದೆ ಬೆರಳು ನಿಲ್ಲಿಸಿಕೊಂಡು ಕ್ಷಣಕಾಲ ತೀಕ್ಷ್ಣ ವಾಗಿ ಯೋಚಿಸುವರು.]

ತ್ರಿಪುರಾಂತಕಯ್ಯ: [ಕಣ್ಣರಳಿಸಿ, ಏಳುತ್ತ,]....ಹ್ಞಾ....ಹ್ಞ....ಹ್ಞಂ! ಹಾಗೆ ಮಾಡಬೇಕು! ಆಗ ತಕೋ, ಇಬ್ರಿಗೂ....

ಸುಮುಕೋಮಲ: [ಸಮೀಪಿಸಿ] ಇಷ್ಟು ಬೇಗ ತೋಚಿತೆಂದ್ರೇ?

ತ್ರಿಪುರಾಂತಕಯ್ಯ: ಓಹೋ! ಈ ನನ್ನ ಮಿದಳೂನ್ನೋದು— ಅದೂ ಇಂಥಾ ವಿಚಾರಗಳಲ್ಲಿ—ಮೆಯಿಲ್ ಟ್ರೇಯಿನ್ ವೇಗದಿಂದ ಓಡೋ ಪದ್ಧತೀನ್ನು! ಏನು ಸಾಮಾನ್ಯಾಂತ ತಿಳಿದುಕೊಂಡ್ಯಾ?.... ಈಗ ನೋಡು, ನಿಮ್ಮ ಲಕ್ಷ್ಮಮ್ಮತ್ತಿಗ್ಗೆ, ಜಗಳದ ಸ್ವಾರಸ್ಯಾನ್ನೋದು, ಪ್ರತ್ಯಕ್ಷವಾಗಿ, ಕಣ್ಣಿಗೆ ಕಟ್ಟಿದ್ಹಾಗೆ ಕಾಣಿಸಬೇಕು!—ಅಂಥಾ ಉಪಾಯ ಹುಡುಕೀದೀನಿ!

ಸುಮುಕೋಮಲ: ಇನ್ನೂ ಚನ್ನಾಗಿ ಯೋಚ್ನೆ ಮಾಡೀಂದ್ರೇ.... ಅವಸರ ಪಡಬೇಡಿ.

ತ್ರಿಪುರಾಂತಕಯ್ಯ : ನಾನು ಹುಡುಕಿರೋ ಪ್ಲಾನು ನಿನಗೇನು ಗೊತ್ತು ?....ಶುಭಸ್ಯ ಶೀಘ್ರಂ ! ವೃಥಾ ಯಾಕೆ ಕಾಲಯಾಪನೆ ? ಪ್ರಾರಂಭಾ ಮಾಡೇಬಿಡೋಣ ಬಾ.

ಸುಮುಕೋಮಲ : ಈಗೇನ್ಮಾಡ್ಬೇಕೂಂತೀರೀ ?

ತ್ರಿಪುರಾಂತಕಯ್ಯ : ಈಗ,....ಮೊದಲು,....ನಾವಿಬ್ರೂ ಘೋರ್‍ಡ್ರಾಗಿ ಜಗಳಾಡಬೇಕು.

ಸುಮುಕೋಮಲ : [ಬೆಚ್ಚಿ] ಆಂ ?!..... ಜಗಳಾಡಬೇಕಾಗಿರೋರು ಅವರೂಂದ್ರೇ— ನ್ಯಾವಲ್ಲಾ ! ಅದೇ ಮರೆತುಬಿಟ್ರೋ ಏನೋ ನೀವೂ !

ತ್ರಿಪುರಾಂತಕಯ್ಯ : ಅವರ ಜಗಳಕ್ಕೇನೇ ನಾ ಹೇಳ್ತಾ ಇರೋದೂನೂ ! ಇದು ಮೂಲ !....ನಾ ಹೇಳೋಹಾಗೆ ಮಾಡ್ತಾ ಬಾ. ಹ್ಯಾಗಾಗುತ್ತೇನ್ನೋದು ಸ್ವಲ್ಪ ನೋಡಿಕೊಂಡು, ಆಮೇಲ್ಹೇಳ್ತೀನಿ ಎಲ್ಲಾ ವಿಶದ್ವಾಗಿ !....[ಬೆತ್ತ ತೆಗೆದುಕೊಳ್ಳುವನು.]

ಸುಮುಕೋಮಲ : [ಕನ್ನಲ್ಲಿ :] ಇದೇನ್ನಿಜವೋ ಸುಳ್ಳೋ ಗೊತ್ತಾಗೋದಿಲ್ವಲ್ಲಾ ! ಅಡಿಗೇ ಮಾಡ್ಲಿಲ್ಲಾನ್ನೋ ಸಿಟ್ಟು ತೀರಿಸಿಕೊಳ್ಳೋ ಆಟಾನೋ ಏನೋ ? ಅಥ್ವಾ ಅವರಿಗೆ ಜಗಳ ಹಚ್ಚೋ ಉಪಾಯಾನೇ ಇದ್ದೀತೋ ! ..ಹ್ಯಾಗಾದ್ರೂ ಒಳ್ಳೇ ಗ್ರಾಚಾರಾ ಬಂತಲ್ಲಾ ನನಗೇ !

ತ್ರಿಪುರಾಂತಕಯ್ಯ : [ಹೆಂಡತಿಯ ಪಕ್ಕದಲ್ಲಿ ನಿಂತು, ಅವಳ ಮುಖವನ್ನೇ ನೋಡುತ್ತ] ಈಗ,.... ನಾನು,......ನಿನ್ನ, ..... ಇಗೋ ಈ ಬೆತ್ತದಿಂದ, ಜಸ್‌ನಾಗಿ ಹೊಡೀತೀನಿ.

ಸುಮುಕೋಮಲ : ಏನೂ ಅವಶ್ಯಕವಿಲ್ಲ.

ತ್ರಿಪುರಾಂತಕಯ್ಯ : ಶುಶ್, ಹಾಗೆಲ್ಲಾ ಅನ್ನಬಾರದು .....ನಾನು ಹೊಡೆಯುತ್ತೀ, ನೀನು ಗಟ್‌ಟ್ಯಾಗಿ ಕಿರಿಚಿಕೋ.

ಸುಮುಕೋಮಲ : ಸ್ವಾಮಿ !—ಅದು ನೀವೇನೂ ಹೇಳಬೇಕಾಗಿಲ್ಲ

ತ್ರಿಪುರಾಂತಕಯ್ಯ : [ಆರಾಮ ಕುರ್ಚಿಯ ಮೇಲಿರುವ ದಿಂಬನ್ನು ಸ್ಟೂಲಿನ ಮೇಲಿಟ್ಟು, ಕೋಪದಿಂದ ಗಟ್ಟಿಯಾಗಿ :] ......ಹಾಗ್ಮಾಡ್ತೀಯಾ ಇನ್ಮೇಲೇ ?

ಸುಮುಕೋಮಲ : [ಅನುಮಾನದಿಂದ, ಮೆಲ್ಲನೆ :].... ಇಲ್ಲಾಂದ್ರೆ, ಹ್ಯಾಗೂ ಮಾಡೋದಿಲ್ಲ.

ತ್ರಿಪುರಾಂತಕಯ್ಯ : [ಮೆಲ್ಲನೆ] ಅಯ್ಯೋ ಪೆದ್ದೇ, ನಿಜಾಂತ ತಿಳ್ಕೊಂಡ್ಯಾ?....ಸುಮ್ನೆ ಹಾಗೆ ನಟನೆ, ಅಷ್ಟೇ! ಹೊಡೆಯೋದು ಈ ದಿಂಬನ್ನ—ನಿನ್ನಲ್ಲ!

ಸುಮುಕೋಮಲ : ಓ, ಹಾಗೋ!? ಸಧ್ಯ!.... [ಯೋಚಿಸಿ,] ಗೊತ್ತಾಯ್ತು ಅಂದ್ರೆ, ತುಂಬಾ ಚನ್ನಾಗಿದೆ ಉಪಾಯ! ...ಆದ್ರೇ,.... ದಿಂಬು ಹೊಡೀತಾ ಹಾಗೇ ಮಧ್ಯೇ ಮಧ್ಯೇ....

ತ್ರಿಪುರಾಂತಕಯ್ಯ : [ಕಿರುನಗೆಯಿಂದ ಮೆಲ್ಲನೆ] ಇಲ್ಲ ಇಲ್ಲ, ಏನೂ ಭಯಪಡಬೇಡ....ಹುಂ, ಎಲ್ಲಾ ಸ್ಪಷ್ಟವಾಗಿ ಕೇಳಿಸಬೇಕು ಮಗ್ಗುಲು ಮನೆಗೆ! ಎಲ್ಲಿ, ತಿರಿಗೀ ಮೊದ್ಲಿಂದ....[ಬೆತ್ತ ಮೇಲಕ್ಕೆತ್ತಿ, ಕೋಪದಿಂದ, ಗಟ್ಟಿಯಾಗಿ :] ...ಆಂ? ಹಾಗ್ಮಾಡ್ತೀಯಾ ಇನ್ಮೇಲೇ?.... [ಮೆಲ್ಲನೆ :] ಊಂ ಅನ್ನು.

ಸುಮುಕೋಮಲ : [ಗಟ್ಟಿಯಾಗಿ] ಊಂ, ನಾ ಹಾಗೇ ಮಾಡೋದು ನಾ ಹಾಗೇ ಮಾಡೋದು! ಅದೇನ್ಮಾಡ್ತೀರೋ ಮಾಡಿ! ಮೊನ್ನೇ ತಾನೇ ಅಷ್ಟು ರಾದ್ಧಾಂತಾ ಮಾಡೀ, ತಿರಿಗೀ ಈ ಹೊತ್ತು ಶುರು ಮಾಡಿದ್ರಲ್ಲಾ! ಹೇಳೋರು ಕೇಳೋರು ಯಾರೂ ಇಲ್ವೇ?

ತ್ರಿಪುರಾಂತಕಯ್ಯ : [ಗಟ್ಟಿಯಾಗಿ] ಏನ್ಹೇಳ್ದೆ ಮಾತು? ಧ್ಯಾಂ!.... [ದಿಂಬಿಗೆ ಒಂದೇಟು ಬಿಗಿಯುವನು].

ಸುಮುಕೋಮಲ : [ಕಿರುನಗೆಯಿಂದ ಹಿಂಡಿ ಸವರಿಕೊಳ್ಳುತ್ತ, ಗಟ್ಟಿಯಾಗಿ ಅ್ಹಹಹ! [ಎನ್ನುತ್ತ ನಗಾಡುವಳು]

ತ್ರಿಪುರಾಂತಕಯ್ಯ : [ಮೆಲ್ಲನೆ] ತಾಳು ಸ್ವಲ್ಪ ನೋಡೋಣ..... [ಕ್ಷಣಕಾಲ ಆಲಿಸಿ,] .... ಇನ್ನೂ ಕೇಳಿಸ್ಲಿಲ್ಲ ಅವರಿಗೆ! ...ಎಲ್ಲಿ, ಇನ್ನೊಂದ್ಸಲ ....[ಮೊದಲಿಗಿಂತ ಗಟ್ಟಿಯಾಗಿ,] ಧ್ಯಾಂ! [ದಿಂಬಿಗೆ ಒಂದೇಟು ಬಿಗಿಯುವನು]

ಸುಮುಕೋಮಲ : [ಕಿರುನಗೆಯಿಂದ ಹಿಂದಿನಂತೆ ನಗಿಯುತ್ತ, ಆದರೆ ಇನ್ನೂ ಗಟ್ಟಿಯಾಗಿ] ಅ್ಹಹಹ!....ಅಯ್ಯೋ ಸತ್ತೇ!

ತ್ರಿಪುರಾಂತಕಯ್ಯ : ಹಾಗೇ!!....ತಾಳು, [(ಇ) ಕಡೆ ನೋಡಿ ಆಲಿಸಿ] ....ಮಾತಾಡ್ತಾ ಇರೋಹಾಗಿದೆ ಪಕ್ಕದ ಮನೇಲಿ!

ತೆರೆಯಲ್ಲಿ (ಇ) ಬಳಿ : ಲಕ್ಷಮ್ಮತ್ತಿಗೆ : [ಗಟ್ಟಿಯಾಗಿ :] ಹೌದು, ಅವ

ರೇಂದ್ರೇ!.... ತಿರಿಗೀ ಜಗಳಾಡ್ತಾ ಇದಾರೆ ಗಂಡಾಹೆಂಡ್ತಿ! ಬೇಗ ಬನ್ನೀಂದ್ರೇ ಹೋಗೋಣಾ.

ತ್ರಿಪುರಾಂತಕಯ್ಯ : [ಕಿರುನಗೆಯಿಂದ ಮೆಲ್ಲಗೆ] ಅ್ರಗೋ, ನಿಮ್ಮತ್ತಿಗೇ ಧ್ವನಿ! ಕೇಳಿಸ್ತು ಆಕೀಗೆ!.....ಬರ್ತಾಳೀಗ ಇಲ್ಲೀಗೆ!....ಬರಲೀ ತಾಳು.

ಸುಮುಕೋಮಲ: [ಕಿರುನಗೆಯಿಂದ] ಆಕೆ ಇಲ್ಲೀಗೆ ಬಂದಾಗ ನಾನೇನ್ಮಾಡ್ಬೇಕೂ?

ತ್ರಿಪುರಾಂತಕಯ್ಯ : [ಮೆಲ್ಲನೆ] ಮೆಲ್ಲಗಾತ್ಮಾಡು, ಕೇಳ್ಸೀತು!..... ಆಕೀ ಇಲ್ಲೀಗೆ ಬಂದಾಗ ನೀನೇನ್ಮಾಡ್ಬೇಕೂಂತೀಯೋ,....ಹೇಳ್ತೀನಿ; ಆ ತಲಬಾಗ್ಲಗಳೀ ಹಾಕೀ ಬಾ [ಎಂದು (ಅ) ಬಾಗಿಲ ಕಡೆ ತೋರಿಸಿ, ಕುಳಿತುಕೊಳ್ಳುವನು (ಕು.)]

ಸುಮುಕೋಮಲ: [(ಅ) ಬಾಗಿಲು ಅಗಳಿ ಹಾಕಿ ಬಂದು, (ಚ) ಕುರ್ಚಿಯಲ್ಲಿ ಕುಳಿತು] ಹೇಳೀಂದ್ರ ಬೇಗಾ!.... ಬಂದ್ಬಿಡ್ತಾಳಾಕೀ!

ತ್ರಿಪುರಾಂತಕಯ್ಯ : [ಮೆಲ್ಲನೆ] ಏನ್ಮಾಡ್ಬೇಕೂಂತೀಯೋ,...... [ಅಭಿನಯ ಸಮೇತ ಕಿವಿಯಲ್ಲಿ ಪಿಸುಗುಟ್ಟಲಾರಂಭಿಸುವನು.]

[ಬೀದಿಯ ತೆರೆ ಬೀಳುವುದು]

---

## ಅಂಕ ೨—ಬೀದಿ

(ತ್ರಿಪುರಾಂತಕಯ್ಯನ ಮನೆಯ ಬಳಿ)

ಆದರ ನಕ್ಷೆ ಹೀಗಿದೆ

| | | | | |
|---|---|---|---|---|
| | | ರ | | |
| ಅ | | | | ಇ |
| | ಯ | | ಲ | |

**ಅ, ಇ:** ಪ್ರವೇಶಗಳು.

**ಯ, ರ, ಲ:** ಸ್ಥಳ ಸಂಕೇತಗಳು.]

**[ಪ್ರವೇಶ (ಅ): ಲಕ್ಷ್ಮಮ್ಮತ್ತಿಗೆ ಮತ್ತು ಶಾಂತಪತಿ]**

[ಲಕ್ಷ್ಮಮ್ಮತ್ತಿಗೆಯು ಗಂಡನನ್ನು ಬಲವಂತದಿಂದ ಎಡಗೈ ಹಿಡಿದೆಳೆಯುತ್ತಿರುವಳು. ಶಾಂತಪತಿಯು ಹಿಂದಕ್ಕೆ ಜಗ್ಗುತ್ತಿರುವನು. ಆವನ ಬಲಗೈಯಲ್ಲಿ ಅಂಚೆಗೆ ಹಾಕಲು ಸಿದ್ಧವಾಗಿರುವ ಒಂಬತ್ತು ಕವರುಗಳಿರುವುವು.]

ಲಕ್ಷ್ಮಮ್ಮತ್ತಿಗೆ: [ಗಂಡನ ಕೈ ಹಿಡಿದೆಳೆಯುತ್ತ] ಬನ್ನೀಂದ್ರೆ ಜಾಗ್ರತೇ.... ಜಗಳ ಆಡ್ತಾ ಇದಾರವರೂ!

ಶಾಂತಪತಿ: [ಹಿಂದಕ್ಕೆ ಜಗ್ಗುತ್ತ, ಹಾಗೂ ಹೆಂಡತಿಯ ಸೆಳೆತದಿಂದ ಸ್ವಲ್ಪ ಸ್ವಲ್ಪವಾಗಿ ಮುಂದಕ್ಕೆ ಬರುತ್ತ,] ಸದ್ಗುರುವೇ, ಶಾಂತಾನಂದಾ!......... ಸುಮ್ಮನೆ ಯಾಕೆಳೀತಾ ಇದ್ದೀಯೇ ಲಕ್ಷ್ಮೀ, ಅವರ ಜಗಳಕ್ಕೆ ನನ್ನಾ!.... ಜಗಳಾಂದ್ರೆ ನನ್ನ ವೈಗಾಗೋದಿಲ್ಲಾನ್ನೋದು ನಿನಗ್ಗೊತ್ತೇ ಇದೆ!....ಎಲ್ಲಾ ಶಾಂತವಾಗಿರಬೇಕು ನನಗೆ!

ಲಕ್ಷ್ಮಮ್ಮತ್ತಿಗೆ: [ಗಂಡನನ್ನು ಮಧ್ಯರಂಗಕ್ಕೆ ಕರೆತಂದು,] ....ಹಾಗಂತ ಸುಮ್ನೆ ಇದ್ದುಬಿಟ್ರೆ ಹ್ಯಾಗೇಂದ್ರೆ? ಮಧ್ಯಾಹ್ನದ್ದೊತ್ತೂ; ಇರೋರಿಬ್ರೂ; ಚಿಕ್ ವಯಸ್ಸು—ಹೇಳೋರಿಲ್ಲಾ, ಕೇಳೋರಿಲ್ಲಾ; ಮೊನ್ನೆ ಹೂಡಿದ ಜಗಳ ಇನ್ನೂ ಆರಿದ್ದಾಗೇ ಇಲ್ಲಾ! ಏನಾದ್ರೂ ಅನರ್ಥ ಮಾಡಿ ಕೊಂಡಾರಾಮೇಲೆ!

ಶಾಂತಪತಿ: [ಏನೂ ತೋಚದೆ] ತ್ರಿಪುರಾಂತಕ ಅನ್ನೋ ಹೆಸರಿಗೆ ಸರಿಯಾಗೇ ಮಾಡ್ತಾನಲ್ಲಾ ಇವನೂ!

ಲಕ್ಷಮ್ಮತ್ತಿಗೆ: ನೀವೊಂದು ಬುದ್ಧೀ ಮಾತಾದ್ರೂ ಹೇಳಬಾರದೇ ಅವರಿಗೆ?....ಕಡೆಗೆ ನಿಮ್ಮ ತಂಗೀಗಾದ್ರೂ....

ಶಾಂತಪತಿ: [ತಲೆ ಮತ್ತು ಕೈ ಅಲ್ಲಾಡಿಸುತ್ತಾ] ಉಹುಹುಂ, ಅದು ಮಾತ್ರ ಸಾಧ್ಯವಿಲ್ಲ!....ನೋಡೂ, ನಿನಗೆ ತಿಳಿಯೋದಿಲ್ಲ. ಜಗಳದ ಮಧ್ಯೆ—ಅದರಲ್ಲೂ ಗಂಡಾಹೆಂಡ್ತಿ ಜಗಳದ ಮಧ್ಯೆ ಹೋಗಲೇ ಬಾರದು. ಈಗ ಜಗಳಾಡ್ತಾರೆ, ಉತ್ತರ ಕ್ಷಣವಲ್ಲೇ ಕಲೆತುಕೋತಾರೆ! ಕೇಳಿದೀಯೋ ಇಲ್ವೋ ಗಾದೆ: ಗಂಡಹೆಂಡಿರ ಜಗಳ....?

ಲಕ್ಷಮ್ಮತ್ತಿಗೆ: ಅಷ್ಟೇಂತೀರಾ?....[ತೆರೆಯ ಸಮೀಪಕ್ಕೆ ಹೋಗಿ ಸ್ವಲ್ಪ ಹೊತ್ತು ಆಲಿಸಿ ಬಂದು,]........ನೀವ್ಹೇಳೋದು ನಿಜಾಂದ್ರೇ, ಈಗೇನೂ ಗಲಾಟೇನೇ ಕೇಳ್ಸೋದಿಲ್ಲಾ ಅವರ ಮನೇಲೀ!

ಶಾಂತಪತಿ: ಆಗ ಕೇಳಿಸಿದ್ದು ತಾನೇ ಏನೂ? ಜಗಳ ಹೌದೋ ಅಲ್ವೋ ಯಾರಿಗ್ಗೊತ್ತು?

ಲಕ್ಷಮ್ಮತ್ತಿಗೆ: ಆಗ ಚನ್ನಾಗೇ ಕೇಳಿಸ್ತಲ್ಲಾಂದ್ರೇ—ಧಬ್ ಧಬ್ ಅಂತಾ!

ಶಾಂತಪತಿ: ಏನೋ, ಹಿಂದ್ಲು ಬೀದೀ ವೆಂಕಟ್ರಮಣಸ್ವಾಮೀ ದೇವಸ್ಥಾನದಲ್ಲಿ ಮಧ್ಯಾಹ್ನದ ಪೂಜೆಗೆ ನಗಾರೀ ಹೊಡೆದಿದ್ರಬಹುದೂ!

ಲಕ್ಷಮ್ಮತ್ತಿಗೆ: ಅಯ್ಯೋ, ನ್ನಂಕೋಮ್ಲುಮ್ಮೂ ಕೂತ್ಕೊಂಡ್ವಾಗೆ ಕೇಳಿಸ್ತಲ್ಲಾಂದ್ರೇ! ನಗಾರೀ ಹೊಡೆದರೆ ಅಕೇ ಯಾಕೆ ಹಾಕ್ಕೋಬೇಕೂ?! ...ಆಗ ಕೇಳಿಸಿದ್ದೇನೋ ಜಗಳಾನೇ!—ಅದರಲ್ಲಿ ಅನುಮಾನವೇನೂ ಇಲ್ಲ. ಮತ್ತಾಗ್ಲೇ ಇಬ್ರೂ ಸರಿಹೋಗಿ ಬಿಟ್ರೋ ಏನೋ! ಅವರು ಜಗಳಾಡೋದೂ ತಪ್ಪಲ್ಲ, ಕಲೆತ್ಕೊಳ್ಳೋದೂ ತಪ್ಪಲ್ಲ! ಎಷ್ಟೋ ಸಲ ನೋಡಿದೀನಿ. ಆತ, ಅದ್ಯಾಕೋ ಇದ್ದಕ್ಕಿದ್ದಾಗೇ ಸಿಟ್ ಮಾಡ್ಕೊಂಡು, [ಅಣಕಿಸುವಂತೆ] "ಹಾಗ್ಮಾಡ್ತೀಯಾ ಇನ್ಮೇಲೆ, ಹಾಗ್ಮಾಡ್ತೀಯಾ ಇನ್ಮೇಲೆ" ಅಂತ ಕೂಗಾಡ್ತಾನೆ! ಅವಳು, [ಅಣಕಿಸುವಂತೆ] "ಊಂ, ನಾ ಹಾಗೇ ಮಾಡೋದು, ನಾ ಹಾಗೇ ಮಾಡೋದು"

ಅಂತಾಳೆ! ಆಮೇಲೆ ಇಬ್ರೂ ಚನ್ನಾಗಿ ಜಗಳ್ವಾಡ್ತಾರೆ! ಅವರಾಡೋ ಜಗಳಾ ನೋಡಿದರೆ, "ಇನ್ನೇನ್ ಗತಿ, ಇಷ್ಟು ಜಗಳ ಆಡಿದೋರು, ಇವರು ನಿಜವಾಗಿ ಮತ್ತೆ ಕಲೀತಾರ್ಯೇ? ಅಂತ ಅನುಮಾನವಾಗುತ್ತೆ! ಆದ್ರೆ ಉತ್ತರಕ್ಷಣದಲ್ಲೇ ಆತ ಹಾಗ್ಹೋಗಿ ಹೇಗ್ಬಂದು, [ಅಣಕಿಸುವಂತೆ] "ಕೋವ್ಮ್ಲ, ಸ್ನಂಕೋವ್ಮ್ಲ, ಟ್ರಿಯರ್!"—ಅಂತಾನೆ! ಅವಳು, [ಅಣಕಿಸುವಂತೆ:] "ಏನಂದ್ರೆ, ಏನಂದ್ರೆ" ಅಂತ ಕುಲುಕ್ತಾ, ತಾವೆಂದೂ ಜಗಳ ಆಡ್ಲೇ ಇಲ್ವೇನೋನ್ನೋ ಹಾಗೆ ಹೊಂದಿಕೋತಾಳೆ! ಇದೆಲ್ಲಾ ಏನಿರಬಹುದೂಂತೀನಿ! ಅದೇನ್ ರಹಸ್ಯಾನೋ ಗೊತ್ತೇ ಆಗೋದಿಲ್ಲ!

**ಶಾಂತಪತಿ :** ಅಶ್ಟೇ ಲಕ್ಷ್ಮೂ, ಇಷ್ಟು ವರ್ಷ ಆಗಿದೆ; ನಾನು ನಿನ್ ಸಂಗಡ ಎಂದಾದ್ರೂ ಜಗಳ ಪೋಟ್ಲಿ ಕಡೆಗೆ ಗಟ್ಯಾಗಿ ಒಂದು ಮಾತಾದ್ರೂ ಆಡಿದ್ದೇನ್ಯೇ ನೀನೇ ಹೇಳು!....ಆಡಬಾರದು, ಜಗಳ ಆಡಬಾರದು. ಅದರಲ್ಲಿ ಸುಖವಿಲ್ಲ. ನಮ್ಮ ನಮ್ಮಗುರು ಶಾಂತಾನಂದರು ಹೇಳೋಹಾಗೆ, ಸುಖ ಇರೋದು ಶಾಂತೀಲಿ! "ಶಾಂತಮುಲೇಕ ಸೌಖ್ಯಮುಲೇದು!" ಅದ್ರಿಂದ ಪ್ರತಿಯೊಬ್ಬರೂ ಕೋಪತಾಪಗಳನ್ನ ಬಿಟ್ಟು ಶಾಂತಿಸಾಧನೆ ಮಾಡಬೇಕು.

**ಲಕ್ಷ್ಮಮ್ಮತ್ತಿಗೆ :** ನಾನೀಗ ಅವರ ಮನೆಗೆ ಹೋಗಿ ಬರೋಣಾಪ್ಪೋ ಬೇಡಪ್ಪೋ ?

**ಶಾಂತಪತಿ :** ತಂಗೀಗೆ ನಮ್ಗೆ ಆಗಿದ್ಯಲ್ಲ ಜಗಳ!—ನೀನ್ಯಾಕೆ ಹೋಗಬೇಕು ?...ನಾನಿಲ್ಲ ಹೋಗೋ ಮನೇಲಿ ನಿನ್ನ ಕೆಲಸ ನೀನು ನೋಡಿಕೋ. ನಾನು ಹೀಗೇ ಹೋಗ್ತಾ ಈ ಒಂಭತ್ತು ಕಾಗದಾನೂ ಅಂಚೇಗ್ಹಾಕಿ ಬರ್ತೀನಿ—ಆಗ್ಲೇ ಅಂಚೇ ಕಛೇರಿ ಹೊತ್ತಾಗ್ತಾ ಬಂತು.

**ಲಕ್ಷ್ಮಮ್ಮತ್ತಿಗೆ :** ಪೇಟೇಗ್ಹೋಗ್ತೀರಾ ? ಹಾಗಾದ್ರೆ ಒಂದು ಬಾರ್ ಸೋಪು ತಕೊಂಡ್ಬನ್ನಿ—ಅದೂ ಮುಗಿಹೋಗಿದೆ ಮನೇಲಿ ; ಬಟ್ಟೆಗೈಲ್ಲಾ ತುಂಬಾ ಮಾಸಿಬಿಟ್ಟಿವೆ ?

**ಶಾಂತಪತಿ:** ತರ್ತೀನೆ....[ಕವರು ಎಣಿಸಿಕೊಳ್ಳುತ್ತ (೩) ಕಡೆಗೆ ಹೋಗುತ್ತಿರುವನು.]

**ಲಕ್ಷ್ಮಮ್ಮತ್ತಿಗೆ :** ಹಾಗೇ ಏನಾದ್ರೂ ತರಕಾರೀ ತರಬೇಕಾಗಿತ್ತೂ—ಇದ್ದದ್ದೆಲ್ಲಾ ಈಗಿನಡಿಗ್ಗೇ ಸರಿಹೋಯ್ತು.

**ಶಾಂತಪತಿ:** ಉಂ....[ಎಂದು ಹಿಂದಕ್ಕೆ ಬಂದು,]....ಬಾರ್ ಸೋಪು, ತರಕಾರಿ—ಎರಡಾಯ್ತು. ಇನ್ನೂ ಏನಾದೂ ತರೋದಿದ್ರೆ ಹೇಳಿಬಿಡು ಈಗ್ಲೇ.

**ಲಕ್ಷಮ್ಮತ್ತಿಗೆ:** ಇನ್ನೇನೋ ಹೇಳಬೇಕೂಂತಿದ್ದೆ!.....[ಯೋಚಿಸಿ,] ....ಉಂ! ಕಾಫೀಪುಡಿ!—ಅಬ್ಬಬ್ಬಾಂದ್ರೆ ಇನ್ನೆರಡ್ಹೊತ್ತಿಗಾದೀತು ಮನೇಲಿರೋ ಪುಡಿ!

**ಶಾಂತಪತಿ:** ಏನು ಕಾಫೀನೋ, ಹಾಳು ಕಾಫಿ! ದುರಭ್ಯಾಸ! ಕಾಫೀ ಬದ್ಲೂ, ನಾ ಹೇಳೋದು ಕೇಳು, ಇನ್ಮೇಲೆ ಮಜ್ಜಿಗೇ ಕುಡ್ಯೋಣ—ಶಾಂತವಾಗಿರುತ್ತೆ!

**ಲಕ್ಷಮ್ಮತ್ತಿಗೆ:** ಹಾಗೇ ಆಯ್ತು......ಬಾರ್ ಸೋಪ್ ಮಾತ್ರಾ ಮೈಸೂರು ಸರ್ಕಾರೀ ಕಾರ್ಖಾನೇದೇ ತಕೊಂಡ್ಬನ್ನಿ, ಇನ್ಯಾವ್ದೂ ಬೇಡ.

**ಶಾಂತಪತಿ:** ಅಷ್ಟೇ ತಾನೇ ತರಬೇಕಾದ್ದು?... ಸ್ರಿ....[(ಇ) ಬಳಿಗೆ ಹೋಗಿ ಹಿಂದಿರುಗಿ ನೋಡಿ,]....ಮನೇಲಿ ನಿನ್ನ ಕೆಲಸ ನೀನು ನೋಡಿಕೋ; ಮತ್ಯಾವ ಸುದ್ದಿಗೂ ಹೋಗಬೇಡ—ತಿಳಿತೋ?....[ತನ್ನಲ್ಲಿ] ಸದ್ಗುರುವೇ, ಶಾಂತಾನಾದಾ!

[ನಿರ್ಗಮ (ಇ) ಶಾಂತಪತಿ.]

**ಲಕ್ಷಮ್ಮತ್ತಿಗೆ:** [ತೆರೆಯ ಸಮೀಪಕ್ಕೆ ಹೋಗಿ, ಆಲಿಸಿ ಬಂದು ತನ್ನಲ್ಲಿ:].... ಸದ್ದೇ ಇಲ್ವಲ್ಲಾ! ಇದೇನಿರಬಹುದು ವಿಚಿತ್ರಾ! ಜಗಳ ಚನ್ನಾಗೇ ಕೇಳಿಸ್ತು ಆಗ?!....ಅಥ್ವಾ, ಅವರ್ಹೇಳಿದ್ಹಾಗೆ; ವೆಂಕಟ್ರಮಣಸ್ವಾಮೀ ನಗಾರೀನೇ ಇದ್ದೀತೋ?!

**ತೆರೆಯ ಹಿಂದೆ:** ತ್ರಿಪುರಾಂತಕಯ್ಯ [ಗಟ್ಟಿಯಾಗಿ] ಢ್ಯಾಂ! [ಎಂದು ದಿಂಬಿಗೆ ಒಂದೇಟು ಬಿಗಿಯುವನು.]

**ತೆರೆಯ ಹಿಂದೆ:** ಸುಮುಕೋಮಲ: [ಗಟ್ಟಿಯಾಗಿ] ಅ್ಹಹಹ!........ ಹಾ!........

**ಲಕ್ಷಮ್ಮತ್ತಿಗೆ:** [ಗಾಬರಿಯಿಂದ ತನ್ನಲ್ಲಿ:] ಅಗೋ, ಮತ್ತೆ ಅದೇ!! ....ಇದು ನಗಾರಿ ಅಂದ್ರೆ ಒಪ್ಪೋ ಮಾತೇ?....ಈ ಸಾರೀ ಯಾಕೋ

ಮೂರು ದಿವ್ಸ ಆದ್ರೂ ಕಲೆತ್ಕೊಂಡೇ ಇಲ್ಲ ಇವರು !.... ಈಗೇನ್ಮಾಡ್ಲಿ.... [ಕೈ ಹಿಸುಕಿಕೊಳ್ಳುತ್ತ,] ಇವರಾದ್ರೂ ಇದ್ದಿದ್ರೆ ಚನ್ನಾಗಿತ್ತಲ್ಲಾ....[ಬೇಗ (ಇ) ಬಳಿಗೆ ಹೋಗಿ ನೋಡಿ,] ಹೊರಟ್ಹೋಗ್ಬಿಟ್ಟಿದಾರೆ! ..... [ಎನ್ನುತ್ತ ಮರಳಿ ಬಂದು, ಆಚೆ ಈಚೆ ನೋಡಿ] .....ಬೀದೀಲೂ ಯಾರೂ ಇಲ್ಲ! ಮಟ ಮಟಮಧ್ಯಾಹ್ನ !....ನಾನಾದ್ರೂ ಹೋಗಿ ನೋಡ್ಕೊಂಡ್ಬರ್ತಿನಿ— ಏನಾದ್ರೂ ಮಾಡ್ಕೊಂಡ್ಬಿಟ್ಟಾರಾಮೇಲೆ !.... [ಎನ್ನುತ್ತ ಅವಸರವಾಗಿ ಹೋಗುವಳು.]

[ನಿರ್ಗಮ (ಇ) : ಲಕ್ಷ್ಮಮ್ಮ ತ್ತಿಗೆ]

[ಬೀದಿಯ ತೆರೆ ಏಳುವುದು]

---

## ಅಂಕ ೩—ತ್ರಿಪುರಾಂತಕಯ್ಯನ ಮನೆಯ ಪಡಸಾಲೆ

[ನಕ್ಷೆ : ೧ ನೆಯ ಅಂಕದಂತೆ]




[ತ್ರಿಪುರಾಂತಕಯ್ಯ ಮತ್ತು ಸುಮಕೋಮಲ]

[ತೆರೆ ಎದ್ದಾಗ ಇಬ್ಬರೂ ನಿಂತು ಪರಸ್ಪರ ಮುಖಗಳನ್ನು ನೋಡಿಕೊಳ್ಳುತ್ತ ನಗುತ್ತಿರುವರು. ತ್ರಿಪುರಾಂತಕಯ್ಯನ ಕೈಯಲ್ಲಿ ಬೆತ್ತವೂ, ಸ್ಟೂಲಿನ ಮೇಲೆ ದಿಂಬೂ ಇರುವುವು ]

ತ್ರಿಪುರಾಂತಕಯ್ಯ : ದಿಂಬೆಲ್ಲಾ ಹರಿದ್ಹೋದ್ರೂ ದಿಕ್ಕೇ ಇಲ್ವಲ್ಲಾ ! ಯಾಕೆ ಬರಲಿಲ್ಲವಾದೀತು ಈಕೇ ? !

ಸುಮಕೋಮಲ : ಬಂದ್ರೆ ಬರ್ಲಿ, ಬಟ್ರೆ ಬಿಡ್ಲಿ, ಇನ್ನೂ ಸ್ವಲ್ಪ ಹೊತ್ತು ಹೀಗೇ ಮಾಡೋಣಾಂದ್ರೆ, ಚನ್ನಾಗಿರುತ್ತೆ !

ತ್ರಿಪುರಾಂತಕಯ್ಯ : ಹೂಂ, ತಕೋ ಹಾಗಾದ್ರೆ ! [ಎಂದು ದಿಂಬಿಗೆ ಒಂದೇಟು ಬಿಗಿದು, ಆಮೇಲೆ ಸುಮಕೋಮಲೆಯನ್ನು ಹೊಡೆಯುವುದಕ್ಕೆ ಹೋಗುವನು.]

ಸುಮಕೋಮಲ : ಹಾ, ಹಾ !....[ಎಂದು ತಪ್ಪಿಸಿ ಕೊಳ್ಳುವಳು.]

ಒಳಗೆ (ಅ) ಬಳಿ : ಲಕ್ಷಮ್ಮತ್ತಿಗೆ : ಸ್ಸುಂಕೋಮ್ಲಮ್ಮಾ, ಸ್ಸಂಕೋಮ್ಲಮ್ಮಾ....ಬಾಗ್ಲು ಬಾಗ್ಲೂ....[ಎಂದು ಬಾಗಿಲ ಮೇಲೆ ಶಬ್ದ ಮಾಡುವಳು]

ತ್ರಿಪುರಾಂತಕಯ್ಯ : [ಮೆಲ್ಲನೆ] ಓ! ಬಂದ್ಲು ನಿಮ್ಮ ಲಕ್ಷ್ಮಮ್ಮತ್ತಿಗೆ ......ಬರ್ಲೇಬೇಕಲ್ಲ!...... [ಎನ್ನುತ್ತ ದಿಂಬನ್ನು ಆರಾಮಕುರ್ಚಿಯಲ್ಲಿಟ್ಟು, ಬೆತ್ತವನ್ನು ಕೈಯಲ್ಲೇ ಇರಿಸಿಕೊಂಡು, ಮೆಲ್ಲನೆ :] ....ನಾ ಹೇಳಿದ್ದೆಲ್ಲಾ ಗೊತ್ತಾಗಿದೆಯಲ್ಲ! ಅದರಂತೆ ಮಾಡಿಬಿಡು, ಎಲ್ಲಾ ಸರಿಹೋಗುತ್ತೆ! ಕೂತುಕೋ ಬಾ ಈ ಆರಾಮಕುರ್ಚೀಲಿ. ನಾ ಹೋಗಿ ಬಾಗಿಲ್ತೆಗೀತೀನಿ.

ಸುಮುಕೋಮಲ : [ಆರಾಮುಕುರ್ಚಿಯಲ್ಲಿ ಕುಳಿತು, ನೋವನ್ನು ನಟಿಸುತ್ತ, ಹಾಗೆ ಹೀಗೆ ಹೊರಳುತ್ತ, ಮೃದುವಾಗಿ :] .... ಹಾ ಅಂ,.... ಹೂ ಉಂ,.... ಅವ್ಮ್ಮಾ ಅ,....

ತ್ರಿಪುರಾಂತಕಯ್ಯ : [ಕಿರುನಗೆಯಿಂದ ಮೆಲ್ಲನೆ :] ಆಹಾ, ಅನುಭವಶಾಲಿ ಎಷ್ಟೇ ಆಗ್ಲಿ ! .... [ಎನ್ನುತ್ತ ಹೋಗಿ, (ಅ) ಬಳಿ ನಿಂತು, ಗಂಭೀರವದನನಾಗಿ, ಬಾಗಿಲು ತೆರೆದು, ಲಕ್ಷ್ಮಮ್ಮನು ಪ್ರವೇಶಿಸುತ್ತಿರಲು ತಾನು (ಯ) ನಿಲುವಿಗೆ ಬೆತ್ತವನ್ನು ಹಾಕಿ, (ಇ) ಬಾಗಿಲ ಬಳಿ ಅರೆಮರೆಯಾಗಿ ನಿಲ್ಲುವನು.]

[ಪ್ರವೇಶ (ಅ) : ಲಕ್ಷ್ಮಮ್ಮತ್ತಿಗೆ]

ಸುಮುಕೋಮಲ : [ಹಿಂದಿನಂತೆ]....ಹಾಅಂ,..... ಹೂಉಂ,.......... ಅವ್ಮ್ಮಾಅ,....

ಲಕ್ಷ್ಮಮ್ಮತ್ತಿಗೆ : [(ಚ) ಕುರ್ಚಿಯ ಬಳಿಗೆ ಹೋಗಿ, ಸುಮುಕೋಮಲೆಯ ಹಿಂದಿರುವ ದಿಂಬನ್ನು ಸರಿಪಡಿಸುತ್ತ]....ಏನು ಗ್ರಾಚಾರಾವ್ಮ್ಮಾ ಇದು, ಮಧ್ಯಾಹ್ನದ್ನೊತ್ತೂ !....ಎಡ ಮಗ್ಗಲ್ಲೆದ್ದಿದ್ಯೋ ಏನೋ ಬೆಳಗ್ಗೆ ! ಎಲ್ಲಿ ಪೆಟ್ಟಾಗಿದೆ ?....ಸ್ವಲ್ಪ ಹಾಗೆ ಸುಧಾರಿಸ್ಕೋ.

ಸುಮುಕೋಮಲ : [ಹಿಂದಿನಂತೆ].....ಹಾಅಂ,........ಹೂಉಂ, .......... [ಎನ್ನುತ್ತ ಹಾಗೇ ಕಣ್ಣು ಮುಚ್ಚಿಕೊಂಡು ದಿಂಬಿಗೆ ಒರಗಿಕೊಂಡು, ತುಂಬಾ ನಿಃಶಕ್ತಳಾಗಿರುವಂತೆ ನಟಿಸುವಳು.]

ಲಕ್ಷ್ಮಮ್ಮತ್ತಿಗೆ : [ಬೀಸಣಿಗೆ ತೆಗೆದುಕೊಂಡು ಅವಳಿಗೆ ಸೋವುತ್ತ (ಚ) ಕುರ್ಚಿಯಲ್ಲಿ ಕುಳಿತು,].... ಅವರಾದ್ರೂ ಇಲ್ಲ ಮನೇಲಿ....ಈಗ್ತಾನೇ ಪೇಟೇಗ್ಹೋದ್ರು.

ತ್ರಿಪುರಾಂತಕಯ್ಯ: [(ಟ) ಕುರ್ಚಿಯ ಬಳಿಗೆ ಬಂದು, ದೃಢವಾಣಿಯಿಂದ]

....ಅಲ್ಲಾ ವಮ್ಮಾ ಲಕ್ಷಮ್ನೋರೇ,—ಲಕ್ಷಮ್ಮಕ್ಕಾ,—ಇವಳೂ,.... ಮೊನ್ನೆ ಯಿಂದಾ ಒಂದೇ ಸಮನಾಗೀ,....[ಅಕಸ್ಮಾತ್ ಸುಮುಕೋಮಲೆಯ ಕಡೆ ನೋಡಿ, ಗಾಬರಿಗೊಂಡವನಂತೆ :] ........ಆಂ ? ! ಮೂರ್ಛೆ ಹೋಗಿ ದಾಳೇನಮ್ಮಾ ? ಕಣ್ಮುಚ್ಕೊಂಡಿದಾಳಲ್ಲಾ, ಅಯ್ಯೋಯ್ಯೋ....[ಎನ್ನುತ್ತ (ವ) ಎಂಬಲ್ಲಿಗೆ ಹೋಗಿ, ಗಾಬರಿಯಿಂದ, ಮೃದುವಾಗಿ :] ...ಕೋಮ್ಲ,.... ಸ್ಸಂಕೋಮ್ಲ,......

ಲಕ್ಷಮ್ಮತ್ತಿಗೆ: ಅಹಹಹ !....[ಅಣಕಿಸುವಂತೆ] "ಕೋಮ್ಲ ! ಸ್ಸಂ ಕೋಮ್ಲ !! ಇಂಥಾ ಸುಮುಕೋಮಲಾನ ಹೀಗೆ ಬೆತ್ತಾ ತಕೊಂಡ್ಹೊ ಡ್ಯೋದಕ್ಕೆ ನಿಮಗೆ ಕೈಯಾದ್ರೂ ಹ್ಯಾಗೆ ಬಂತು, ತ್ರಿಪುರಾಂತಕಯ್ಯ ನೋರೇ ?!.... ಹೀಗುಂಟೇನಪ್ಪಾ ಎಲ್ಲಾದ್ರೂ ?

ತ್ರಿಪುರಾಂತಕಯ್ಯ: [ಕೈಬೆರಳಿನಿಂದ ಸುಮುಕೋಮಲೆಯ ಶ್ವಾಸವನ್ನು ಅರಿತುಕೊಂಡು, ಮೆಲ್ಲನೆ].... ಪರವಾಯಿಲ್ಲ, ಉಸಿರಾಡ್ತಾ ಇದೆ !

ಲಕ್ಷಮ್ಮತ್ತಿಗೆ: ದೇವರು ದೊಡ್ಡೋನಿದ್ದ! ಸ್ವಲ್ಪ ಏನಾದ್ರೂ ಹೆಚ್ಚೂ ಕಡಮೆ ಆಗಿದ್ರೆ ಏನ್ ಗತಿ !

ತ್ರಿಪುರಾಂತಕಯ್ಯ: [ಕೈಗೆ ಸಿಕ್ಕಿದ ಕಳ್ಳನಂತೆ ತಲೆಬಾಗಿಸಿಕೊಂಡು, ಕೈ ಹಿಸುಕಿಕೊಳ್ಳುತ್ತ,] ಗೊತ್ತಾಗ್ಲಿಲ್ಲಾ ವಮ್ಮಾ— ಇಷ್ಟೊಂದ್ ಪೆಟ್ಟಾಗಿದೇ ನ್ನೋದು ಗೊತ್ತಾಗ್ಲಿಲ್ಲಾ....ಸುಮ್ನೆ ರೇಗಿಸಿಬಿಟ್ಳು!.......... [ಕರವಸ್ತ್ರದಿಂದ ಸುಮುಕೋಮಲೆಗೆ ಸೋವುತ್ತ, ಮೃದುವಾಗಿ:]....ಸುಮಾ,....ಒಂದ್ಮಾತಾದ್ರೂ ಆಡೇ .....

ಸುಮುಕೋಮಲ: [ಹುಬ್ಬು ಗಂಟಿಟ್ಟುಕೊಂಡು ಸ್ಪಷ್ಟವಾಗಿ:] ಉಹ್ಹುಂ [ಎಂದು ಮುಖವನ್ನು ಆಚೆಗೆ ತಿರುಗಿಸಿಕೊಳ್ಳುವಳು.]

ಲಕ್ಷಮ್ಮತ್ತಿಗೆ : ನೀವೀಗ ಮಾತಾಡಿಸ್ಬೇಡೀಪ್ಪಾ....ಸ್ವಲ್ಪ ಹೊತ್ತು ಹಾಗ್ಹೋಗಿ ಬನ್ನಿ ಎಲ್ಲಾದ್ರೂ.

ತ್ರಿಪುರಾಂತಕಯ್ಯ : ಹೀಗಿರೋಳ್ನ ಬಿಟ್ಟು ಹ್ಯಾಗಮ್ಮಾ ಹೋಗೋದೂ !......ಉಂ, ಹೋಗಿ ಡಾಕ್ಟರ್‌ನಾದ್ರೂ ಕರಕೊಂಡ್ಬರಲೇ ನಮ್ಮ?

ಸುಮುಕೋಮಲ: [ಅಸಮಾಧಾನದಿಂದ ಸ್ಪಷ್ಟವಾಗಿ] ಬ್ಬೇಕಿಲ್ಲ.

ತ್ರಿಪುರಾಂತಕಯ್ಯ : [ಸ್ವಲ್ಪ ಗೆಲುವಾದಂತೆ:] ಅಗೋಮ್ಮ ಮಾತಾ ಡ್ತಾಳೆ, ಪರವಾಯಿಲ್ಲ !

ಲಕ್ಷಮ್ಮತ್ತಿಗೆ : ಪರವಾ ಏನೂ ಇಲ್ಲಪ್ಪಾ ; ಡಾಕ್ಟರೇನೂ ಬೇಡ— ಆಕೀಗೆ ಬೇಕಿಲ್ಲ.... ನೀವು ತಾನೇ ಏನಂತ ಹೊಳ್ಕೋತೀರಿ ಡಾಕ್ಟರ ಮುಂದೆ? ನಾ ಎಲ್ಲಾ ನೋಡ್ಕೋತೀನಿ, ....ನಿವ್ರೂ, .....

ತ್ರಿಪುರಾಂತಕಯ್ಯ : ಹೂಮ್ಮಾ, ಹಾಗ್ಹೋಗ್ಬಿಟ್ಬಿಟ್ತೀನಿ....ನೀವೇ ನಮ್ ಪಾಲಿನ ದೇವರು !....[ಎನ್ನುತ್ತ ಹೋಗಲಾರದವನಂತೆ ಹಿಂದಹಿಂದಕ್ಕೆ ನೋಡುತ್ತ, (ಯ) ನಿಲುವಿನ ಬಳಿಗೆ ಹೋಗಿ, ಕೋಟು, ಹ್ಯಾಟು, ಕೈಗೆ ತೆಗೆದು ಕೊಳ್ಳುವನು.

ಸುಮಕೋಮಲ : [ಕ್ಷೀಣಸ್ವರದಲ್ಲಿ] ನೀರು .....ನೀರು ...

ಲಕ್ಷಮ್ಮತ್ತಿಗೆ : ನೀರು ಬೇಕೇ ? ತರ್ತೀನಮ್ಮ....[ಎಂದು ಏಳುವಳು]

[ಅಷ್ಟರಲ್ಲಿ ತ್ರಿಪುರಾಂತಕಯ್ಯನು (ಇ) ಬಾಗಿಲನ್ನು ಪ್ರವೇಶಿಸಿ, ಗಾಜಿನ ಲೋಟದಲ್ಲಿ ನೀರು ತಂದು ಮೇಜಿನ ಮೇಲಿಡುವನು. ಲಕ್ಷಮ್ಮನು ಅದನ್ನು ಸುಮ ಕೋಮಲೆಗೆ ಕೊಡುವಳು.]

ಸುಮಕೋಮಲ : [ಸ್ವಲ್ಪ ನೀರು ಕುಡಿದು, ನೆಟ್ಟಗೆ ಕುಳಿತು,] ಅ್ಹ,.... ಸ್ವಲ್ಪಥಣ್‌ಗಾಯ್ತು ! [ಎಂದು ಬೀಸಣಿಗೆಯನ್ನು ತೆಗೆದುಕೊಳ್ಳುವಳು]

ಲಕ್ಷಮ್ಮತ್ತಿಗೆ : ನಾ ಸೋವತೇನಮ್ಮ, ಬೀಸಣಿಗೆ ಕೊಡು ಇಲ್ಲಿ.

ಸುಮಕೋಮಲ : ಏನೂ ಪರವಾಯಿಲ್ಲ ಅತ್ತಿಗೆ, ಈಗ ಹುಷಾರಾ ಗಿದ್ದೀನಿ.

ಲಕ್ಷಮ್ಮತ್ತಿಗೆ : [ಮೃದುರಾಗಿ] ಹುಷಾರಾಗಿದ್ದೀಯಾಮ್ಮಾ? [ಎಂದು ಸುಮಕೋಮಲೆಯ ತೋಳನ್ನು ಮುಟ್ಟುವಳು.]

ಸುಮಕೋಮಲ : [ತೋಳನ್ನು ಥಟಕ್ಕನೆ ಹಿಂದಕ್ಕೆ ತೆಗೆದುಕೊಳ್ಳುತ್ತ,] ಅ್ಹಹಹ! ಅಲ್ಲಿ ಮುಟ್ಟಿದರೆ ಛಳಕ್ ಅನ್ನುತ್ತೆ!....ಅಲ್ಲಾ, ಡಾಕ್ಟರ್‌ನ ಬೇರೇ ಕರೀತಾರಂತೆ—ಪುಕಾರಾಗೋದಕ್ಕೆ !........ ಹೊರಟ್ಹೋದ್ರೋ ಇನ್ನೂ ಇಲ್ವೋ ಇವರೂ ?........[ಎನ್ನುತ್ತ ಗಂಡನ ಕಡೆಗೆ ತಿರುಗಿ ನೋಡುವಳು.]

[ತ್ರಿಪುರಾಂತಕಯ್ಯನು ಹ್ಯಾಟು, ಕೋಟು, ಕೈಯಲ್ಲೇ, ಹಿಡಿದುಕೊಂಡು

ಕಳ್ಳನಂತೆ ಭುಜಗಳನ್ನು ಕುಗ್ಗಿಸಿಕೊಂಡು (ಅ) ಬಳಿಗೆ ಹೋಗಿ, ಬೇಗ ಚಪ್ಲಿ ಮೆಟ್ಟಿಕೊಂಡು, ಹೊರಟುಹೋಗುವನು.]

[ನಿರ್ಗಮ (ಅ) : ತ್ರಿಪುರಾಂತಕಯ್ಯ]

ಲಕ್ಷಮ್ಮತ್ತಿಗೆ : ನೀನಾದ್ರೂ ಸುಧಾರಿಸ್ಕೊಂಡ್ಹೋಗಬಾರದಾಗಿತ್ತೇ ಸುಮಕೋಮಲವ್ಮಾ, ಯಾಕೆ ರೇಗಿಸ್ದೆ ಆತನ್ನ ?— "ನಾಹಾಗೇ ಮಾಡೋದು, ನಾ ಹಾಗೇ ಮಾಡೋದು" ಅಂತ ?

ಸುಮಕೋಮಲ: [ಮೂತಿ ಉದ್ದಕ್ಕೆ ಮಾಡಿಕೊಂಡು,]....ಯ್ಯಾಕೋ ! ....[ಎಂದು ಮುಖವನ್ನು ಆಚೆಗೆ ತಿರುಗಿಸಿಕೊಳ್ಳುವಳು.]

ಲಕ್ಷಮ್ಮತ್ತಿಗೆ : ಏನೋ ಇದೆ ರಹಸ್ಯಾ!........ಕಾರಣ ಇಲ್ದೇನೇ ಇಷ್ಟೆಲ್ಲಾ ಆಗುತ್ಯೇ ?

ಸುಮಕೋಮಲ : ಯಜಮಾನ್ರು ಹೊಡ್ಯೋವಕ್ಕೆ ಒಂದು ಕಾರಣಾನೇ ಲಕ್ಷ್ಮಮ್ಮತ್ತಿಗೇ ? ಒಂದೊಂದಿವ್ಸ ಒಂದೊಂದ್ಕಾರಣ !........ ಒಂದಿವ್ಸ "ನಲ್ಲೀಲಿ ನೀರು ಯಾಕೆ ಥಣ್‌ಗಿದೆ" ಅಂತ ಹೊಡೀತಾರೆ! ಇನ್ನೊಂದಿವ್ಸ "ಆಕಾಶ ಯಾಕೆ ಹಚ್ಚಗಿಲ್ಲ" ಅಂತ ಹೋಡೀತಾರೆ! ಮತ್ತೊಂದು ದಿವ್ಸ "ಹುಣಿಸೇಕಾಯಿ ಯಾಕೆ ಡೊಂಕು" ಅಂತ ಹೊಡೀತಾರೆ!....ನಿನಗೆ ತಾನೇ ಗೊತ್ತಿಲ್ವೇನು ಇಂಥಾದ್ದೆಲ್ಲಾ ?

ಲಕ್ಷಮ್ಮತ್ತಿಗೆ : [ಆಶ್ಚರ್ಯದಿಂದ] ಇಲ್ಲಾವ್ಮಾ!....ಇಂಥಾದ್ದೆಲ್ಲಾ ನಾ ಕಾಣೆ....ಜಗಳದ ಸುಳಿವೇ ಇಲ್ಲ ನಮ್ಮನೇಲಿ !

ಸುಮಕೋಮಲ : ಏನು ಒಪ್ನಾ ಇಟ್ಕೊಂಡ್ಕೀತಿ ಬಿಡತ್ತಿಗೆ !

ಲಕ್ಷಮ್ಮತ್ತಿಗೆ : ಒಪ್ನಾ ಅಲ್ಲಾವ್ಮಾ...ನಿನಗ್ಗೊತ್ತಿಲ್ವೇ ನಿಮ್ಮಣ್ಣಾವ್ರು ಎಷ್ಟು ಒಳ್ಳೇವ್ರೂನ್ನೋದೂ ?

ಸುಮಕೋಮಲ : ಅದಿನ್ ಹ್ಯಾಗೆ ಸಂಸಾರಾ ಮಾಡ್ತೀರೋ ಏನೋವ್ಮಾ ನೀವಿಬ್ರೂ—ಜಗಳಾನೇ ಆಡದೆ !

ಲಕ್ಷಮ್ಮತ್ತಿಗೆ : [ಗಲ್ಲದ ಮೇಲೆ ಬೆರಳಿಟ್ಟುಕೊಂಡು,] ಇದೇನು ಸುಮಕೋಮಲಮ್ಮ ಸೋಜಿಗದ ಮಾತಾಡ್ತಿ !

ಸುಮಕೋಮಲ : ಅದೂ ನಿಜವೇ! ಜಗಳದ ರುಚೀ, ಸ್ವಾರಸ್ಯಾ, ಗೊತ್ತಿಲ್ಲದೋರಿಗೆ ಸೋಜಿಗಾನೇನ್ನು !....ಹುಂ! ಬಲ್ಲೋರೇ ಬಲ್ರು ಬೆಲ್ಲದ ಸವಿ !

ಲಕ್ಷಮ್ಮತ್ತಿಗೆ: ಏನು, ಏನು!?....ಸ್ಸವೀ?!

ಸುಮುಕೋಮಲ: ಹೂಂ, ಸ್ಸವಿ!....ಅದರಲ್ಲೂ ಯಜಮಾನ್ರಿಗೆ ಸಂಬ್ಳಾ ಬಂದ ಹೊಸದರಲ್ಲಿ ಜಗಳವಾಡಿದರಂತೂ ತುಂಬಾ ಸವೀ ಅತ್ತಿಗೇ!.... ನೋಡು, ನಾನಂತೂ, ಎಂದು ಸುಮ್ನೆ ಇದ್ರೂ, ಅವರಿಗೆ ಸಂಬ್ಳಾ ಬಂದಾಗ ಮಾತ್ರಾ, ಏನಾದ್ರೂ ಕೀಟ್ಲೇ ಮಾಡಿ, ಮೆಲ್ಲಗೆ ರೇಗ್ಸಿ, ಏಟು ತಿಂದುಬಿಡ್ತೀನಿ!

ಲಕ್ಷಮ್ಮತ್ತಿಗೆ: ಓ!....... ಹಾಗಾದ್ರೇ ನೀನೇ ಏಟು ಬಯಸಿ ತಿಂತೀಯನ್ನು!!.... ಯಾಕೆ?—ಅವರಿಂದ ಹೊಟ್ಟೇ ತುಂಬುತ್ತೇನು?

ಸುಮುಕೋಮಲ: ಹಾಗಾದ್ರೇ ಏಟು ತಿನ್ನೋದರ ಸುಖ ನಿನ ಗ್ಗೊತ್ತೇ ಇಲ್ಲಾಂತ ಆಯ್ತು! ಒಂದು ದಿವ್ಸ ತಿಂದು ನೋಡು, ನಿನಗೇ ಗೊತ್ತಾಗುತ್ತೆ!

ಲಕ್ಷಮ್ಮತ್ತಿಗೆ: ಈಗ ನೀನು ಪಡ್ತಾ ಇರೋ ಸುಖ ನೋಡ್ತಾ ಇದ್ದೀನಲ್ಲಮ್ಮಾ!

ಸುಮುಕೋಮಲ: ಹಾಗಲ್ಲ ಅತ್ತಿಗೇ!.... ಇನ್ನೂ ನೋಡ್ತಾ ಇರು. ಈಗ ಇಷ್ಟಾಗಿದ್ಯಲ್ಲಾ, ಇಲ್ಲಿಂದಾ ಮುಂದಕ್ಕೆ ನಮ್ಮೋರು ನನ್ನ ವಿಷಯ ದಲ್ಲಿ ಹ್ಯಾಗೆ ನಡಕೋತಾರೇನ್ನೋದು ತಾನಾಗಿ ಗೊತ್ತಾಗುತ್ತೆ ನಿನಗೆ! —ನಾನ್ಯಾಕೆ ಹೇಳಬೇಕು?

ಲಕ್ಷಮ್ಮತ್ತಿಗೆ: ಏನೋಪ್ಪಾ, ನೀನ್ಯಾಕೋ ಹ್ಯಾಗೆ ಹ್ಯಾಗೋ ಮಾತಾಡ್ತಾ ಇದ್ದೀ!...ಅಂದ್ಹಾಗೆ, ಊಟ ಆಗಿದ್ಯೋ ಇನ್ನೂ ಇಲ್ವೋ? ....ನಮ್ಮನೇಗಾದ್ರೂ ಬಾ ಹೋಗೋಣ.

ಸುಮುಕೋಮಲ: ಅಡಿಗೆ ಆಗಿದೆ ಅತ್ತಿಗೇ!....ಊಟಾನೂ ಆಗುತ್ತೆ!

ಲಕ್ಷಮ್ಮತ್ತಿಗೆ: ಹಾಗಾದ್ರೆ ಒಳಕ್ಹೋಗೋಣ ಬಾಮ್ಮ....ಬಡಿಸ್ತೀನಿ, ಹೊತ್ತಾಗಿದೆ.

ಸುಮುಕೋಮಲ: ಒಳಗಾಗಿಲ್ಲ ಅತ್ತಿಗೇ, ಅಡಿಗೇ!....ಇನ್ನೆಲ್ಲೋ ಆಗಿದೆ—ಅದಕ್ಕೆಲ್ಲಾ ಬೇರೇ ಏರ್ಪಾಡಾಗುತ್ತೇನ್ನು....ಅವರೀಗ ಎಲ್ಲೀ ಗ್ಹೋಗಿದಾರೇನ್ನೋದು ನನಗ್ಗೊತ್ತು!

**ಲಕ್ಷಮ್ಮತ್ತಿಗೆ :** ಹ್ಯಾಗಿರೋದೋವ್ಮ !....ಒಂದಿಷ್ಟು ಕಾಫೀಗಾದ್ರೂ ಇಡ್ಲೇನು ?

**ಸುಮುಕೋಮಲ :** ಈ ಬಿಸಿಲ್ಹೊತ್ತಿನಲ್ಲಿ ಕಾಫೀ ಇನ್ಯಾಕತ್ತಿಗೆ? ಮಾಡೋದಾದ್ರೆ ಒಂದಿಷ್ಟು ಷರಬತ್ತು ಮಾಡು, ಕುಡ್ಯೋಣ.

**ಲಕ್ಷಮ್ಮತ್ತಿಗೆ :** ಒಂದ್ನಿಮಿಷ್ದಲ್ಲಿ ಮಾಡ್ಕೊಂಡ್ಬರ್ತೀನಿ ತಾಳು. [ಎನ್ನುತ್ತ (ಇ) ಬಾಗಿಲಿನ ಕಡೆಗೆ ಹೋಗುತ್ತಿರುವಳು.]

**ಸುಮುಕೋಮಲ :** ಷರಬತ್ತಿನ ಸೀಸೆ ಆ ಲೋಟಾಗಳ್ಹತ್ತಿರಲೇ ಇದೆ.

**ಲಕ್ಷಮ್ಮತ್ತಿಗೆ :** ಹೊಂ ಹೊಂ. [ನಿರ್ಗಮ (ಇ) : ಲಕ್ಷಮ್ಮತ್ತಿಗೆ]

**ಸುಮುಕೋಮಲ :** [ಬೀಸಣಿಗೆಯಿಂದ ಸೋಕಿಕೊಳ್ಳುತ್ತ, ತನ್ನಲ್ಲಿ : ].... ಇಷ್ಹೊತ್ತಿಗೆ ಬರಬೇಕಾಗಿತ್ತಲ್ಲಾ ಇವರೂ! ಸೈಕಲ್ ಮೇಲ್ಹೋಗಿ ಸರ್ರನೆ ಬರ್ತೀನಿ, ಇಲ್ಬಿಟ್ರೆ ಜಟ್ಕಾದಲ್ಹೋಗಿ ಜಾಗ್ರತೆ ಬರ್ತೀನಿ ಅಂತ ಹೇಳಿದ್ರು! ಇನ್ನೂ ಯಾಕೆ ಬರಲಿಲ್ವೋ!

[ಪ್ರವೇಶ (ಅ) : ತ್ರಿಪುರಾಂತಕಯ್ಯ.]

[ತ್ರಿಪುರಾಂತಕಯ್ಯನು ಬತ್ತಾಸು, ಮಿಠಾಯಿ, ಓಂಪುಡಿ, ಕಿತ್ಲೇತೊಳೆ ಪೆಪ್ಪರ್‌ಮಿಂಟ್, ಟೇಪು, ರಿಬ್ಬನ್, ಬಳೆಸುರಳಿ, ಜಾಕೆಟ್ ಬಟ್ಟೆ, ಎರಡು ಹೊಸ ಸೀರೆ, ಇವುಗಳನ್ನುಳ್ಳ ಕಾಗದಪೊಟ್ಟಣಗಳನ್ನೂ, ಮತ್ತು ಒಂದು ಜೊತೆ ಬಣ್ಣದ ಗಿಳಿಗಳನ್ನೂ, ಎರಡು ಕೈಗಳಿಂದಲೂ ಎದೆಗಪ್ಪಿಕೊಂಡು ಸಂಭ್ರಮದಿಂದ ಪ್ರವೇಶಿಸುವನು.]

**ತ್ರಿಪುರಾಂತಕಯ್ಯ :** [ಬಾಗಿಲಲ್ಲೇ ನಿಂತು, ಸುತ್ತಲೂ ನೋಡಿ,]........ ಆಗ್ಲೇ ಹೊರಟ್ಹೋಗಿ ಬಿಟ್ರೇನು ನಿಮ್ಮತ್ತಿಗೆ?!

**ಸುಮುಕೋಮಲ :** [ಬಾಯಿ ಮೇಲೆ ಬೆರಳಿಟ್ಟುಕೊಂಡು, ಮೆಲ್ಲನೆ]........ ಹುಶ್,....ಒಳಗಿದಾಳೆ, ಬರ್ತಾಳೀಗ.

**ತ್ರಿಪುರಾಂತಕಯ್ಯ:** ಬರ್಩ಿ ಬರ್ಲಿ, [ಎನ್ನುತ್ತ (ಅ) ಬಳಿ ಚಪ್ಲಿ ಬಿಟ್ಟು, (ಚ) ಕುರ್ಚಿಯ ಬಳಿಗೆ ಹೋಗಿ, ತಂದಿರುವ ಸಾಮಾನನ್ನು ಸ್ಟೂಲಿನ ಮೇಲಿಟ್ಟು, ಹ್ಯಾಟು ತೆಗೆದು (ಯ) ನಿಲುವಿಗೆ ಹಾಕಿಬರುವನು.]

[ಪ್ರವೇಶ (ಇ) : ಲಕ್ಷಮ್ಮತ್ತಿಗೆ]

[ಲಕ್ಷಮ್ಮನು ಎರಡು ಗಾಜಿನಲೋಟ ಷರಬತ್ತಿನ ಸಮೇತ ಪ್ರವೇಶಿಸಿ, (ಇ) ಬಾಗಿಲಲ್ಲೇ ನಿಂತು, ತ್ರಿಪುರಾಂತಕಯ್ಯನು ಬಂದಿರುವುದನ್ನು ನೋಡಿ, ಕೈಯಲ್ಲಿರುವ ಲೋಟಗಳನ್ನು (ಪ) ಮೇಜಿನ ಮೇಲಿರಿಸಿ, (ಟ) ಕುರ್ಚಿಯ ಹಿಂದಕ್ಕೆ ಬಂದು, ದಂಪತಿಗಳನ್ನು ನೋಡುತ್ತ ನಿಲ್ಲುವಳು. ಆಕೆ ಬಂದಿರುವ ಳೆಂದು ಸುಮುಕೋಮಲೆಯು ಕಣ್ಣುಸನ್ನೆಯಿಂದ ಗಂಡನಿಗೆ ತಿಳಿಸುವಳು: ತ್ರಿಪುರಾಂತಕಯ್ಯನು ಗೊತ್ತಾಯಿತೆಂದು ಕಣ್ಣು ಮಿಟುಕಿಸುವನು.]

ತ್ರಿಪುರಾಂತಕಯ್ಯ: [ದೈನ್ಯದಿಂದ] ಕ್ಷಮಿಸ್ಬಿಡು ಸುಮಾ, ಇದೊಂದ್ಸಲ.... ನೋಡು, ಏನೇನೋ ತಂದಿದೀನಿ ಪೇಟೆಯಿಂದಾ!.... ಇಷ್ಟು ಸಿಟ್ಟುಮಾಡಿಕೊಂಡ್ರೆ ಹ್ಯಾಗೆ? ಇನ್ಮೇಲೆಂದೂ ಹಾಗ್ಮಾಡೋದಿಲ್ಲ ನಾನು!.... ಮಾತಾಡೋದಿಲ್ವೇ? ...[ಒಂದು ಬಣ್ಣದ ಗಿಳಿಯನ್ನು ಎಡ ಅಂಗೈಯಲ್ಲಿರಿಸಿಕೊಂಡು, (ಲ) ಎಂಬಲ್ಲಿಗೆ ಬಂದು, ಗಿಳಿಯನ್ನು ನೋಡುತ್ತ, ಕಥೆ ಹೇಳುವ ಶೈಲಿಯಲ್ಲಿ:]........ಎಲೈ ಅರಗಿಳಿಯೇ,....ಒಂದೂರಿನಲ್ಲೀ,.... ಗಂಡಾ ಹೆಂಡ್ತೀ ಇಬ್ರಿದ್ರಂತೇ!........ಒಂದಾನೊಂದು ದಿವ್ಸ ಏನೋ ಅಕಸ್ಮಾತ್ ಗಂಡನಿಗೆ ಸಿಟ್ಟು ಬಂದು ಹೆಂಡ್ತೀ ಸಂಗಡ ಜಗಳಾಡಿದ ನಂತೇ!.... ಇಷ್ಟು ಮಾತ್ರ ಕಾರಣಕ್ಕೇ ಹೆಂಡ್ತಿ ಅವನ್ನ ಮಾತಾಡ್ನೋದೇ ಕೈಬಿಟ್ಳಂತೆ!—ಇಂಥಾ ವಿಚಿತ್ರಾನ ನೀನು ಎಂದಾದ್ರೂ ಕೇಳಿದ್ದೆಯಾ?!

ಲಕ್ಷಮ್ಮತ್ತಿಗೆ: [ದಿಗ್ಭ್ರಾಂತಳಾಗಿ, ಕಣ್ಮುಚ್ಚಿಕೊಂಡು, ತನ್ನಲ್ಲಿ:] ಇ— ಇದೇನೋ ತುಂಬಾ ಹೊಸ ಥರಾ!

ಸುಮುಕೋಮಲ: [ಇನ್ನೊಂದು ಗಿಳಿಯನ್ನು ಬಲ ಅಂಗೈಯಲ್ಲಿರಿಸಿಕೊಂಡು, (ಅ) ಬಾಗಿಲ ಬಳಿ ಬಂದು ನಿಂತು, ಗಿಳಿಯನ್ನು ನೋಡುತ್ತ,]........ ಎಲೈ ಅರಗಿಳಿಯೇ. ನೀನು ಎಷ್ಟೋ ದೇಶಗಳ ಮೇಲೆ ಹಾರಾಡಿದ್ದೀಯಲ್ಲಾ, ಸೀರೇ ತಕೊಂಡ್ಬನ್ನಿ ಅಂದ್ರೆ ಜೆತ್ತಾ ತಕೊಂಡ್ಬಂದೂ, ಆಮೇಲೆ ಬೆಲ್ಲದಂಥಾ ಮಾತಾಡೋದಕ್ಕೆ ಬಂದ್ರೇ, ಯಾರಾದರೂ ಮರುಳಾಗ್ತಾರೆಯೇ, ನೀನೇ ಹೇಳು!

ಲಕ್ಷಮ್ಮತ್ತಿಗೆ: [ಗಲ್ಲದ ಮೇಲೆ ಬೆರಳಿಟ್ಟುಕೊಂಡು, ತನ್ನಲ್ಲಿ:] ಇವರೇ ಅರಗಿಳಿಗಳಾಗಿ ಬಿಟ್ಟಿದಾರಲ್ಲಾ!

ತ್ರಿಪುರಾಂತಕಯ್ಯ: ಎಲೈ ಅರಗಿಳಿಯೇ, ಆ ಕಾಗದ ಪೊಟ್ಟಣಗಳಲ್ಲಿ

ಏನೇನಿದೆ ಅನ್ನೋದು ನಿನಗೇನಾದರೂ ಗೊತ್ತೇ ?

ಸುಮುಕೋಮಲ : ಎಲ್ಲೈ ಅರಗಿಳಿಯೇ, ಮೇಲುಗಡೆ ಕಾಗದ ಸುತ್ತಿರೋವಾಗ, ಒಳಗಡೆ ಏನಿದೆ ಅನ್ನೋದು ಹ್ಯಾಗೆ ತಾನೇ ಗೊತ್ತಾಗುತ್ತೆ? ನೀನೇ ಹೇಳು !....ಪೊಟ್ಣ ಬಿಚ್ಚು, ನೋಡೋಣ !

ತ್ರಿಪುರಾಂತಕಯ್ಯ : [ಪೊಟ್ಟಣಗಳನ್ನು ಬೇಗ ಬೇಗ ಬಿಚ್ಚುತ್ತ,]........ ಇಗೋ, ಎರಡು ಸೀರೆ !—ಈ ಪೈಕಿ ಯಾವುದು ಬೇಕಾದ್ರೂ ಆರಿಸಿಟ್ಕೋಬಹುದು !........ಇವು ಟೇಪು, ರಿಬ್ಬನ್—ಎಷ್ಟೊಂದು ಬಣ್ಣ ಇವೆ ನೋಡು !....ಇದು ಬಳೇ ಸುರುಳಿ—ನಮೂನಮೂನೆ ಬಳೆ ಇವೆ ಬೇಕಾದಷ್ಟು !....ಇದು ಜಾಕೆಟ್ ಬಟ್ಟೆ—ಎಷ್ಟು ಸೊಗಸಾಗಿದೆ ಬಳ್ಳೀ ವರಸೆ ಇದರ ಮೇಲೆ ! ಅಲ್ದೇ, ಬತ್ತಾಸೂ, ಮಿಠಾಯಿ, ಓಂಪುಡಿ. ಪೆಪ್ಪರ್‌ಮಿಂಟೂ—ಕಿತ್ಲೇತೊಳೇದೂ !

ಸುಮುಕೋಮಲ : ಆಂ ?! ಕಿತ್ಲೇತೊಳೇದೇ ?!....ಅಯ್ಯೋ ನನ್ನರಗಿಳಿಯೇ, ಹಾಗಂತಾ ಮೊದ್ಲೇ ಹೇಳಬಾರದಾಗಿತ್ತೇ ?

ತ್ರಿಪುರಾಂತಕಯ್ಯ : [ಹೆಂಡತಿಗೆ ಎರಡು ಪೆಪ್ಪರ್‌ಮಿಂಟ್ ಕೊಡುವನು ; ಅವಳು ಬಾಯಲ್ಲಿ ಹಾಕಿಕೊಳ್ಳುವಳು. ತಾನೂ ಎರಡು ಪೆಪ್ಪರ್‌ಮಿಂಟ್ ಬಾಯಲ್ಲಿ ಹಾಕಿಕೊಂಡು, ಅಕ್ಕರೆಯಿಂದ :] ಕೋಮ್ಲಾ, ಸುಸ್ನುಂಕೋಮ್ಲಾ, ಡ್ಯಿಯರ್.

ಸುಮುಕೋಮಲ [ಕುಲುಕುತ್ತ]....ಏನಂದ್ರೆ ? [ಎಂದು ಗಂಡನನ್ನು ಸಮೀಪಿಸುವಳು.]

ಲಕ್ಷಮ್ಮತ್ತಿಗೆ : [ತನ್ನಲ್ಲಿ] ರಾಜೀ ಆಗೇ ಬಿಟ್ರಲ್ಲಾ ಇವರೂ! ಇದ್ದಕ್ಕಿದ್ದಾಗೇ !....ಈಗ್ಗೊತ್ತಾಯ್ತು ಇವರ ಜಗಳಗಳ ಅಂತರ್ಯ !

ತ್ರಿಪುರಾಂತಕಯ್ಯ : ಮಾಡರ್ನ್ ಹೋಟ್ಲಿಗ್ಹೋಗಿ ಬಂದಿದೀನಿ, ಎರಡೂಟಕ್ಕೆ ! ಈಗ ಅಲ್ಲೀಗ್ಹೋಗಿಬಿಡೋಣ !....ಅಲ್ಲಿಂದಾ ಬಂದ್ಮೇಲೆ ಸಂತೋಷ್ ಥಿಯೇಟರ್ !!– ತುಂಬಾ ಚನ್ನಾಗಿದ್ಯಂತೆ ಸಿನಿಮಾ !....

ಸುಮುಕೋಮಲ : [ಸಂಭ್ರಮದಿಂದ] ಸಿನಿಮಾ ಹೆಸರೇನೂಂದ್ರೆ ?

ತ್ರಿಪುರಾಂತಕಯ್ಯ : ಸಿನಿಮಾ ಹೆಸರೂ....ಜೂಲಾ !....ಈಗ ನಾ ಹೋಗಿ ಜಟಕಾ ತಂದುಬಿಡ್ತೀನಿ ಬೇಗ !—ಅಷ್ಟೊತ್ತಿಗೆ ಸಿದ್ಧವಾಗಿರು. ....[ಹ್ಯಾಟ್ ಮತ್ತು ಚಪ್ಲಿ ಧರಿಸಿ, ಲಕ್ಷಮ್ಮನ ಕಡೆ ನೋಡಿ,]....ಅಗೋ

ನಿಮ್ಮತ್ತಿಗೇನ್ರೂ ಬಂದ್ರಲ್ಲ! ಆ ಸೀರೇ ತೋರಿಸು, ಯಾವುದು ಚೆನ್ನಾಗಿದೆಯೋ ಕೇಳು....ನಾ ಬರಲಾ?

ಸುಮಕೋಮಲ: ಈಗ ನೀವು ಬಂದದ್ದು ಜಟಕಾದಲ್ಲೋ ಸೈಕಲ್ ಮೇಲೋ?

ತ್ರಿಪುರಾಂತಕಯ್ಯ: ಸೈಕಲ್ ಮೇಲ್ಹೋಗಿ ಸರ್ರನೆ ಬಂದೆ!

ಸುಮಕೋಮಲ: ಹಾಗಾದ್ರೆ ಈಗ ಜಟಕಾದಲ್ಲಿ ಜಾಗ್ರತೆ ಬಂದ್ಬಿಡಿ ....ಹೊತ್ತಾಗ್ಬಿಟ್ಟೀತು!

ತ್ರಿಪುರಾಂತಕಯ್ಯ: ಹುಕ್ಕುಂ!....ಈಗ ಬಂದ್ಬಿಟ್ನೇ.

[ನಿರ್ಗಮನ (ತ): ತ್ರಿಪುರಾಂತಕಯ್ಯ.]

ಸುಮಕೋಮಲ: [ಅತ್ತಿಗೆಯ ಬಳಿಗೆ ಬಂದು]....ನಾನಾಗ್ಲೇ ಹೇಳ್ಲಿಲ್ವೇನತ್ತಿಗೆ--'ಬೇರೇ ಏರ್ಪಾಡಾಗುತ್ತೇಂತ' ಹಾಗೇ ಆಗಿದೆ ನೋಡು! ...ಬಾ, ಮೊದ್ಲು, ಈ ತಿಂಡೀ ತಕೊಳ್ಳೋಣ....ಕಾಫೀ ಆಗ್ಲೇ ಸಿದ್ಧವಾಗಿದೆ ಶರಬತ್ತೂ! ತುಂಬಾ ಚುರುಕಪ್ಪ ನಿನ್ನ ಕೈ! ಎಷ್ಟು ಬೇಗ ಮಾಡಿಬಿಟ್ಟಿದ್ದೀ!....[ಎನ್ನುತ್ತ ಶರಬತ್ತಿನ ಲೋಟಗಳನ್ನು ತಾನು ಸ್ಟೂಲಿನ ಮೇಲಿಡುವಳು.]

[ಸುಮಕೋಮಲೆಯೂ ಆರಾಮ ಕುರ್ಚಿಯಲ್ಲೂ, ಲಕ್ಷ್ಮಮ್ಮನು (ಚ) ಕುರ್ಚಿಯಲ್ಲೂ ಕುಳಿತು, ತಿಂಡಿಗೆ ಕೈಹಾಕುವರು]

ಲಕ್ಷಮ್ಮತ್ತಿಗೆ: ನಿನ್ನೆ ನೀವಿಬ್ರೂ ಇಷ್ಟು ಹೊತ್ತಿಗೆ ಸರಿಯೋದಿರಲ್ಲ! ....ಆದ್ರೂ ತುಂಬಾ ಒಳ್ಳೇವ್ರಮ್ಮ ನಿಮ್ಮಣ್ಣಾವ್ರು! ಎಷ್ಟು ಕರುಣೇ! ಎಷ್ಟು ಕನಿಕ್ರ!

ಸುಮಕೋಮಲ: [ಮೆಲ್ಲನೆ ತನಲ್ಲಿ:] ಏಟು ಕೊಟ್ಮೇಲೆ ಯಾರಾದ್ರೂ ಹಾಗೇನ್ನು!....[ಅತ್ತಿಗೆಗೆ:] ಅದಕ್ಕೇ ಅತ್ತಿಗೇ, ನಾ ಹೇಳೋದೂ—ಇದೆಯಮ್ಮಾ ಇದೆ, ಏಟು ತಿನ್ನೋದರಲ್ಲಿ ಸುಖ ಇದೆ ಅಂತ! ಈಗ್ಲಾದ್ರೂ ಗೊತ್ತಾಯ್ತೇ? ಏಟು ತಿಂದರೆ ಅವರಿಗೆ ನಮ್ಮೇಲೆ ಒಂದು ಸ್ವಾಮ್ಯ, ಒಂದು ಅಭಿಮಾನ, ಹುಟ್ಟುತ್ತೆ! ಏಟು ಕೊಡೋದಕ್ಕೆ ಅವರಿಗೆ ಹಕ್ಕಿದೆ; ಏಟು ತಿನ್ನೋದಕ್ಕೆ ನಾವು ಬಾಧ್ಯರು! ನಮಗೆ ತಾನೇ ಅವರಲ್ಲದೆ ಮತ್ಯಾರು ಏಟು ಕೊಡೋರು?....ಏಟು ಬೇಡ ಅನ್ನೋದಾದ್ರೆ,

ಅವರಿಗೂ ನಮಗೂ ಪ್ರೀತಿ, ವಿಶ್ವಾಸ, ಹುಟ್ಟೋ ಮಾರ್ಗನಾದ್ರೂ ಯಾವುದು ?—ನೀನೇ ಹೇಳು.

ಲಕ್ಷಮ್ಮತ್ತಿಗೆ : [ತೀಕ್ಷ್ಣವಾಗಿ ಯೋಚಿಸುತ್ತ,]........ಏನೋಮ್ಮ, ಇದೆಲ್ಲಾ ನನಗೆ ತೋಚೇ ಇರಲಿಲ್ಲ!

ಸುಮುಕೋಮಲ : ಈಗ,........[ಒಂದು ಬತ್ತಾಸು, ಒಂದು ಮಿಠಾಯಿ, ಅತ್ತಿಗೆಯ ಮುಂದೆ ಹಿಡಿದು,]......ಇದೇನ್ಹೇಳು,....ಹೇಳತ್ತಿಗೇ.

ಲಕ್ಷಮ್ಮತ್ತಿಗೆ : ....ಬತ್ತಾಸೂ, ಮಿಠಾಯೀ.

ಸುಮುಕೋಮಲ : ನೋಡಿದ್ಯಾ? ಬೆತ್ತದಲ್ಲೇ ಇರೋದು—ಬತ್ತಾಸೂ ಮಿಠಾಯೀ! ಹೌದೋ ಅಲ್ವೋ?....ನೋಡೂ, ಸಂಬ್ಳಾ ಬಂದಾಗ, ಮೊದ್ಲು ಏಟು ತಿಂದ್ರೆ, ಆಮೇಲೆ ಇವೆಲ್ಲಾ ತಿನ್ನೋದು ಸಾಧ್ಯವಾಗುತ್ತೆ! ಅಲ್ದೆ, ಏನೇನು ಬೇಕೋ ಎಲ್ಲಾ ಬಂದುಬಿಡುತ್ವೆ ಮನೆಗೆ—ಸರಸರಾಂತ!........ಅಲ್ಲಾ, ಸೀರೇ ತಕೊಂಡ್ಬನ್ನೀಂತ ಈಗ ಹದಿನೈದ್ದಿವ್ಸದಿಂದ ದಮ್ಮಯ್ಯಗುಡ್ಡೆ ಇಟ್ರೂ, ತರೋದಿಲ್ಲಾಂತ ಒಂದೇ ಹಠಾ ಹಿಡಿದಿದ್ದೋರೂ, ಈಹೊತ್ತು ತಾವಾಗಿ ಹೋಗಿ ಸೀರೇ ತಂದಿರೋ ಕಾರಣಾನಾದ್ರೂ ಏನೂ? ಅಷ್ಟು ಬಲವಾದ ಪೆಟ್ಟು ತಿನ್ನದೇ ಇದ್ರೆ ಇಷ್ಟು ಒಳ್ಳೇ ಸೀರೆ ಬರ್ತಾ ಇತ್ತೇ?—ನೀನೇ ಯೋಚ್ನೆಮಾಡು!.... ಹಾಗೇ ಇನ್ನೆರಡು ವಾರ ನೋಡ್ತಾ ಇರು—ಎಷ್ಟು ವಿಶ್ವಾಸದಿಂದ ಇರ್ತಾರೋ ಅವರು ನನ್ ಮೇಲೆ!....[ಷರಬತ್ತು ಸವಿಯುವಳು.]

ಲಕ್ಷಮ್ಮತ್ತಿಗೆ : [ಷರಬತ್ತು ಸವಿಯುತ್ತ,]........ನೀ ಹೇಳೋದೆಲ್ಲಾ ಸರಿಯೇ!....ಆದ್ರೇ,........ನಾನೊಂದೆರಡು ಪ್ರಶ್ನೆ ಕೇಳ್ತೀನಿ. ಅವಕ್ಕೆ ಸಮಂಜಸವಾಗಿ ಉತ್ತರ ಕೊಡು; ಆಗ ನಾ ಒಪ್ಪಿಕೋತೀನಿ!

ಸುಮುಕೋಮಲ : ಕೇಳು, ನಿನ್ನ ಮನಸ್ಸಿನಲ್ಲಿರೋದೆಲ್ಲಾ ಕೇಳು.

ಲಕ್ಷಮ್ಮತ್ತಿಗೆ : ಜಗಳ ಆಡದೇ ಇದ್ರೂ ಅದೊಂದು ನಮೂನೆಯಾಗಿ ಸುಖವಾಗೇ ಇರುತ್ತಲ್ಲಾ! ಇನ್ನು ಜಗಳ ಯಾಕೆ ಆಡಬೇಕೂ?

ಸುಮುಕೋಮಲ : ಸಪ್ಪೆಸಾರೂ ಅನ್ನ ತಿಂದು ಕೊಂಡಿದ್ರೂ ಅದೂ ಒಂದು ನಮೂನೆಯಾಗಿ ಇದ್ದೇ ಇರುತ್ತೆ! ಸಾರಿಗೆ ಮೆಣಸಿನಪುಡಿ ಯಾಕ್ಹಾಕ್ಬೇಕೂ?

**ಲಕ್ಷಮ್ಮತ್ತಿಗೆ :** ಗೊತ್ತಾಯ್ತು ! ಸಾರಿಗೆ ಮೆಣಸಿನಪುಡಿ ಇದ್ದಾಗೆ ಜೀವನಕ್ಕೆ ಜಗಳ !—ಅಲ್ವೆ ?

**ಸುಮುಕೋಮಲ :** ಅಲ್ವೇ ಜಗಳಾ ಇಲ್ಲದ ಜೀವನಕ್ಕೂ ಗಾಣದೆ ತ್ತಿನ ಜೀವನಕ್ಕೂ ಏನು ವ್ಯತ್ಯಾಸ?—ಹೇಳು.

**ಲಕ್ಷಮ್ಮತ್ತಿಗೆ :** ಅದೂ ನಿಜವೇ!....ಆದ್ರೇ,....ಜಗಳ ಆಡೋದು.... ಆಡಿಕೆ ಅಲ್ವೇ ?—ನೋಡಿದ ಜನ ನಗೋದಿಲ್ವೇ ?

**ಸುಮುಕೋಮಲ :** ಆಡಿಕೆ ಏನಿದೆ ಅದರಲ್ಲೀ ? ಸತ್ಯಭಾಮೆ ಶ್ರೀ ಕೃಷ್ಣನ ಸಂಗ್ಟ ಎಷ್ಟ್ ಸಾರ್ತಿ ಜಗಳ್ಯಾಡಿಲ್ಲಾ ?........ಪಾರ್ವತೀ ಪರ ಮೇಶ್ವರನ ಸಂಗ್ಟ ಎಷ್ಟ್ ಸಾರ್ತಿ ಜಗಳ್ಯಾಡಿಲ್ಲಾ ?....ಬ್ರಹ್ಮಚಾರಿಗ ಳಾದ ನಾರದ ಮುನೀಶ್ವರರು ಕೂಡಾ ಕಲಹ ಪ್ರಿಯರು ಅಂತ ಬಿರುದು ಸಂಪಾದ್ನೋದಕ್ಕೆ ಎಷ್ಟ್ ಶ್ರಮಾ ಪಟ್ಟಲ್ಲಾ ?

**ಲಕ್ಷಮ್ಮತ್ತಿಗೆ :** ಹೌದು, ಸತ್ಯಭಾಮೆಗೆ ಮೂಗಿನ ಮೇಲೇ ಸಿಟ್ಟು ! ಗಂಡನ್ನ ತಕ್ಕಡೀ ಹತ್ತಿಸಿದೋಳಲ್ವೇ ಅವಳೂ ? !........ಅದೆಲ್ಲಾ ಸರಿ ಹೋಯ್ತೂ !....ಆದ್ರೇ,....ಅಲ್ಲಾ ಸುಮುಕೋಮಲಮ್ಮಾ, ಬೆತ್ತದೇಟು ಮೈಮೇಲೆ ಬಿದ್ದಾಗಾ,....ನೋಯೋದಿಲ್ವೇ ?

**ಸುಮುಕೋಮಲ :** [ನಗು ನುಂಗಿಕೊಳ್ಳುತ್ತ.]........ಬ್ಬಲವಾದ ಪೆಟ್ಟಾದ್ರೆ. ಅಬ್ಬಬ್ಬಾಂದ್ರೆ ಸ್ವಲ್ಪ ಚುರಕ್ ಅಂದೀತು, ಅಷ್ಟೇ !— ಒಂದು ಕೆಂಪುಗೊಪ್ಪ ಕಚ್ಚಿದ್ದಾಗೆ ! ...ಆದ್ರೂ ಹಾಯಾಗಿರುತ್ತೆ !

**ಲಕ್ಷಮ್ಮತ್ತಿಗೆ :** ಅಷ್ಟೇನೇ....ಹಾಗಾದ್ರೇ, ಸೀರೇ ಬರೋದಕ್ಕೆ.... ಪೆಟ್ಟು ಬಲವಾಗೇ ತಿನ್ನಬೇಕೋ ?

**ಸುಮುಕೋಮಲ :** ಅಂ ನೋಡು ! ಹಾಗೆ ಬಾ ದಾರೀಗೆ !.......... ಸೀರೆಗೆ ಬಲವಾಗೇ ತಿನ್ನಬೇಕು—ಈಗ್ತಾನೇ ನೋಡಿದ್ಯಲ್ಲ ನೀನೇ !.... ಆದ್ರೆ ಜಾಕೆಟ್ಟಿಗೆ, ಅಷ್ಟು ಬಲವಾದ್ದು ಬೇಕಿಲ್ಲ—ಒಂದು ಎಡಗೈಗುದ್ದಾ ದರೆ ಸಾಕು !....ರಿಬ್ಬನ್ನಿಗೆ ಇನ್ನೊಂದು ಥರಾ !....ಹೀಗೇ, ಪೆಟ್ಟು ಎಷ್ಟು ಮಟ್ಟಿಗೆ ತಿನ್ನಬೇಕು ಅನ್ನೋದು ಅಯಾ ಸಾಮಾನಿನ ಮೇಲೆ ಹೋಗು ತ್ತೇನ್ನು !

**ಲಕ್ಷಮ್ಮತ್ತಿಗೆ:** ಓಹೋ ಹಾಗೋ ?!........ಸುಂಕೋಮ್ಲಮ್ಮಾ,....

ಸ್ನಂಕೋವ್ಲ ವ್ಕಾ,....ವಯಸ್ಸಿನಲ್ಲಿ ನೀನು ನನಗಿಂತ ಚಿಕ್ಕೋ ೞಾದ್ರೂ, ಅನುಭವದಲ್ಲಿ ದೊಡ್ಡೋಳೇ ಸರಿ!.....ನನಗ್ಗೊತ್ತೇ ಇರಲಿಲ್ಲ ಜಗಳದ ಸ್ವಾರಸ್ಯ! ನೀನಾಡ್ತಾ ಇರೋ ಮಾತುಗ್ಳು, ಹಾಗೇ, ನನ್ನ ಕಣ್ಣು ತೆರಸ್ತಾ ಇವೆ!

ಸುಮುಕೋಮಲ : ಇಷ್ಟು ವರ್ಷ ಸಂಸಾರ ಮಾಡಿದ್ದೀ, ಹೇಳ್ದ್ರೀತ್ತಿ ಯಲ್ಲಾ ಅತ್ತಿಗೇ! ನಾ ಏನ್ಹೇಳ್ಲಿ?! ಹುಂ, ಇದುವರೆಗೂ ನಿನ್ ಸಂಸಾರಾ ಹ್ಯಾಗೋ ನಡೆದಾಯ್ತಲ್ಲ, ಇನ್ ಮುಂದಕ್ಕಾದ್ರೂ ಬದ್ಲಾ ಯಿಸ್ಕೋ! ವೃಥಾ ಯಾಕೆ ಕಾಲಯಾಪನೆ? ಈಗ ಅಣ್ಣನಿಗೂ ಸಂಬ್ಳಾ ಬಂದಿರಬೇಕು—ಮುನಿಸಿಪಾಲಿಟಿಯಿಂದ : ಹಾಗೂ ಆ ಜಮಿನಿನ ವರಮಾನಾನೂ ಬಂದಿರಬಹುದು. ಆದ್ರಿಂದ ಆತ ಪೇಟೆಯಿಂದ ಮನೆಗೆ ಬರುತ್ಲೂ, ಸ್ವಲ್ಪ ಏನಾದ್ರೂ ಕೇಟ್ಲೀ ಮಾಡಿ, ಮೆಲ್ಲಗೆ ಒಂದು ಸಣ್ಣ ಜಗಳ ತೆಗಿ—ಅಥ್ವಾ ದೊಡ್ಡದೇ ತೆಗೀತೀಯೋ?

ಲಕ್ಷಮ್ಮತ್ತಿಗೆ : [ದೃಷ್ಟಿಯನ್ನು ಸ್ವಲ್ಪ ಬಾಗಿಸಿ, ಕಾಲು ಬೆರಳನ್ನು ನೆಲದ ಮೇಲೆ ಆಡಿಸುತ್ತ,] ...ನನಗೂ ನೀರೇನೇ ಬೇಕಾಗಿತ್ತೂ ಊ!

ಸುಮುಕೋಮಲ : ಓ, ಹಾಗಾದ್ರೆ ನನ್ ಜಗಳ ಆದ್ರೆ ಸಾಲ್ದು!— ಏನೇನೂ ಸಾಲ್ದು!!....ದೊಡ್ಡದೇ ಆಗಬೇಕು!....ಹಾಗೂ, ಬಾಯಲ್ಲೀ ಕೈಯಲ್ಲೀ ಆಗೋ ಮಾತಲ್ಲಾ --ಬೆತ್ತಾ ಬಯಲಿಗೆ ಬರಬೇಕೂ!

ಲಕ್ಷಮ್ಮತ್ತಿಗೆ : [ಯೋಚನೆಯಲ್ಲಿ :]....ನಮ್ಮೋರು ಜಗಳಾನೇ ಆಡೋ ವ್ರಲ್ಲಲ್ಲಾ, ಹ್ಯಾಗೆ ತರಿಸೋದು ಬಯಲಿಗೆ ಬೆತ್ತಾನಾ?

ಸುಮುಕೋಮಲ : ಅಆ ಇಈ ಯಿಂದಾ ಹಿಡಿದು ಎಲ್ಲಾ ನಾನೇ ಹೇಳಿಕೊಡಬೇಕಾಗಿದೆಯಲ್ಲಾ ನಿನಗೇ!....ಅಲ್ಲಾ ಅತ್ತಿಗೇ, ಗಂಡಸರಿಗೆ ಸಿಟ್ಟು ಬರಿಸೋದು ಏನ್ ಮಹಾ?! ನಿನ್ನ ಗಂಡನಿಗೆ ಏನು ಮಾಡಿದರೆ, ಅಥ್ವಾ ಮಾಡದೇ ಇದ್ರೆ, ಸಿಟ್ ಬರುತ್ತೇನ್ನೋದು ನಿನಗ್ಗೊತ್ತಿರಬೇಕು!....ಯೋಚ್ನೇಮಾಡಿ ನೋಡು, ಗೊತ್ತಾಗುತ್ತೆ! ... ಅಣ್ಣ ಮನೆಗೆ ಬರುತ್ಲೂ ಅದನ್ನ ಮಾಡಿ, ಅಥ್ವಾ ಮಾಡದೆ, ಜಗಳಾ ಹೂಡಿ ಬೆಳಸ್ತಾ ಬಾ....ಬೇಕಾದ್ರೆ ನಾನೂ ಆಗಾಗ ಬಂದು, ಜಗಳ ಹ್ಯಾಗೆ ಬೆಳೀತಾ ಇದೆ ಅನ್ನೋ ಮೇಲ್ವಿಚಾರಣೆ ನೋಡಿಕೊಂಡು, ತಕ್ಕ ಸಲಹೆ ಕೊಡ್ತೀನಿ.

ಲಕ್ಷಮ್ಮತ್ತಿಗೆ: ಹೂಂನ್ನ್ಯಾ ಹಾಗ್ಯಾಡ್ತೀಯಾ?....ಇದೆಲ್ಲಾ ನನಗಿನ್ನೂ ಹೊಸದು, ಅನುಭವ ಇಲ್ಲಾ. ಆದ್ರಿಂದ ನೀನು ಅಷ್ಟು ಮಟ್ಟಿಗೆ ಫೋಡ್ ಮನಸ್ ಮಾಡಿ, ನನಗೆ ಆಸರೆ? ಕೊಟ್ರೇ, ನಿನ್ನುಪಕಾರ ಎಷ್ಟು ಏನ್ನ ಆದ್ರೂ ಮರೆಯೋದಿಲ್ಲ! ಕೃತಜ್ಞಳಾಗಿರ್ತೀನಿ!

ಸುಮುಕೋಮಲ: [ತನ್ನಲ್ಲಿ] ಎಷ್ಟು ದಿನಾ ಆದ್ರೂ ಮರೆಯೋದಿಲ್ಲ! ಹ್ಯಾಗೆ ತಾನೇ ಮರೆಯುತ್ತೆ?!....[ಅತ್ತಿಗೆಗೆ]....ಇಷ್ಟಕ್ಕೆಲ್ಲಾ ನೀನು ಅಷ್ಟು ಹೇಳ್ಬೇಕೇ ಅತ್ತಿಗೇ? ಚೆನ್ನಾಯ್ತು! ಅತ್ತಿಗೇ—ನಾದಿನೀ ಅಂದ್ಮೇಲೆ ಒಬ್ರಿಗೊಬ್ರು ಇಷ್ಟು ಮಟ್ಟಿಗೂ ಆಸರೆ ಆಗದೇ ಇದ್ರೆ, ಇದಿನ್ ಹ್ಯಾಗೆ?....ಆಯ್ತೂ, ಈಗ ಜಗಳ ಹ್ಯಾಗೆ ಪ್ರಾರಂಭಾ ಮಾಡ್ಬೇಕೊಂತಿದ್ದೀ?

ಲಕ್ಷಮ್ಮತ್ತಿಗೆ: ಅದನ್ನೂ ಒಂದ್ಕಡೆ ಯೋಚ್ನೇ ಮಾಡ್ತಾ ಇದೀನೀ. ....ನೋಡೂ, ಬೆನಾರೆಸ್ ಸೀರೇ ತಕೊಂಡ್ಬನ್ನೀಂತ ಎಷ್ಟೋ ದಿನದಿಂದ ಕೇಳ್ತಾ ಇದೀನಿ—ನನಗೆ ತುಂಬಾ ಆಸೆ ಅದರ ಮೇಲೆ ಆದ್ರೆ ಅವರಿಗೆ ಬೆನಾರೆಸ್ ಸೀರೇ ಕಣ್ಡಿಂದ್ರೆ ಆಗೋದಿಲ್ಲ!—ಧರ್ಮಾವರದ್ದೇ ತಕೋ ಅಂತಾರೆ! ಮನೇ ತುಂಬಾ ಇವೆ ಧರ್ಮಾವರದ ಸೀರೆ—ನನಗೆ ಬೇಜಾರು! ಆದ್ರಿಂದ ಈಗ ಮನೆಗ್ಹೋಗುತ್ಲೂ, ಬೆನಾರೆಸ್ ಸೀರೇ ತಕೊಂಡ್ಬನ್ನೀಂತ ಕೇಳಿ ನೋಡ್ತೀನಿ—ಏನಂತಾರೋ.

ಸುಮುಕೋಮಲ: ಕೇಳಿ ನೋಡೋದಿನ್ನೇನು? "ಬೆನಾರೆಸ್ ಸೀರೇನೇ ಆಗಬೇಕೂ, ಧರ್ಮಾವರದ್ದು ಬೇಡಾ, ಈಹೊತ್ತೇ ತರಬೇಕು ನನ್ ಮನಸ್‌ನಲ್ಲಿರೋಂಥಾದ್ದು" ಅಂತ ಒಂದೇ ಹಠ ಹಿಡಿದು ಬಿಡು! ....ಏನ್ಹೇಳಿದರೂ ಜಗ್ ಬೇಡ!

ಲಕ್ಷಮ್ಮತ್ತಿಗೆ: ಹೂಂ, ಹಾಗ್ಮಾಡ್ಲೋ? ಹಾಗೇ ಮಾಡ್ತೀನಿ!.... ಇಷ್ಟುಮಟ್ಟಿಗೆ ಹೇಳ್ಕೊಡೋರೊಬ್ರಿದ್ರೆ ಬೇಕಾದ್ ಮಾಡೇನು :........ [(ಅ) ಕಡೆ ನೋಡಿ,] ಅಗೋ ನಿಮ್ಮಣ್ಣನ್ನು!.... .....[ಎನ್ನುತ್ತ ಎದ್ದು **ಸ್ವಲ ಹಿಂದಕ್ಕೆ ಸರಿದು ನಿಲ್ಲುವಳು.**]

[ಪ್ರವೇಶ (ಅ) : ತ್ರಿಪುರಾಂತಕಯ್ಯ.]

[**ತ್ರಿಪುರಾಂತಕಯ್ಯನು ಕೋಟು ಜೇಬುಗಳಲ್ಲಿ ಹಸ್ತಗಳನ್ನು ಮುಳುಗಿಸಿ**

ಕೊಂಡು, ಯೋಚನಾಮಗ್ನನಾಗಿ ಪ್ರವೇಶಿಸಿ, ನಿಧಾನವಾಗಿ (೮) ಎಂಬಲ್ಲಿಗೆ ಬರುವನು.]

ಸುಮುಕೋಮಲ: [ಏಳದೆ] ಯಾಕೇಂದ್ರೆ, ತುಂಬಾ ಯೋಚನಾಕ್ರಾಂತರಾಗಿರೋದು ?

ತ್ರಿಪುರಾಂತಕಯ್ಯ : [ಯೋಚನೆಯಲ್ಲಿ] ..............ಈಗೇನ್ಮಾಡ್ಬೇಕೋ ಏನೋ !—ಯೋಚ್ನೇಗಿಟ್ಕೊಂಡಿದೆ !

ಸುಮುಕೋಮಲ : ಕಾರಣ ?

ತ್ರಿಪುರಾಂತಕಯ್ಯ : ತೋಚದೇ ಇರೋದೇ ಕಾರಣ !........[ಸ್ಪಷ್ಟವಾಗಿ :] ಜಟಕಾ ಸಿಗ್ಲಿಲ್ಲ !

ಸುಮುಕೋಮಲ : ಇಷ್ಟೇ ತಾನೇ? ... ಹಾಗಾದ್ರೆ ಸೈಕಲ್ ತಕೊಳ್ಳಿ .....ಆಹೊತ್ತಿನ್ಹಾಗೆ ನಾನೆಲ್ಲಾ ಹಿಂದುಗಡೆ ಕ್ಯಾರಿಯರ್ ಮೇಲೆ....

ತ್ರಿಪುರಾಂತಕಯ್ಯ : ಸೈಕಲ್ ಕ್ಯಾರಿಯರ್ ಆಹೊತ್ತೇ ಮುರಿದ್ಹೋಯ್ತಲ್ಲ !

ಸುಮುಕೋಮಲ: ಹೌದಲ್ವೆ ಅಂದ್ಹಾಗೆ ?!........ಆಯ್ತು, ನಡಕೊಂಡೇ ಹೋಗೋಣಾ ಬನ್ನೀಂದ್ರೆ, ಏನೀಗ ?!

ತ್ರಿಪುರಾಂತಕಯ್ಯ : ಈ ಬಿಸ್ಲಲ್ಲಿ ನಿನ್ನ ಅಷ್ಟು ದೂರಾ ನಡೆಸ್ಬೇಕಲ್ಲೇ ಸುಮುಕೋಮಲಾ !

ಸುಮುಕೋಮಲ : ಏನ್ ಮಹಾ ಬಿಸ್ಲೂಂದ್ರೆ ?... [ಕಣ್ಣು ಮಿಟುಕಿಸುತ್ತ,] ...ಒಂದು ಬೆತ್ತದೇಟಿಗೆ ಸಮನಾದೀತೇ ಈ ಬಿಸ್ಲು ?!....ಅಲ್ದೇ ನನಗೆ ತುಂಬಾ ಆಸೆ—ಇಷ್ಹೊತ್ತಿನಲ್ಲಿ, ಟಾರ್ ರಸ್ತೇಮೇಲೆ, ಚುರಕ್ ಚುರಕ್ ಅಂತ ನಡಕೊಂಡು ಹೋಟ್ಳಿಗೆ ಊಟಕ್ಹೋಗೋದು ! ತುಂಬಾ ಚನ್ನಾಗಿರುತ್ತೆ !

ತ್ರಿಪುರಾಂತಕಯ್ಯ : ಸರೀ ಹಾಗಾದ್ರೆ, ಹಾಗೇ ಮಾಡೋಣ,.... ಈಗ ಸೀರೇ ಯಾವುದಿರಲೀಂತ ಆಯ್ತೂ ?

ಸುಮುಕೋಮಲ : [ಅತ್ತಿಗೆಗೆ ಹೊಸ ಸೀರೆಗಳ ಅಂಚು, ಸೆರಗು, ತೋರಿಸುತ್ತ,]....ನೀ ಹೇಳಿಬಿಡು ಅತ್ತಿಗೆ !....ನೀ ಹ್ಯಾಗ್ಹೇಳಿದರೆ ಹಾಗೆ !

ಲಕ್ಷಮ್ಮತ್ತಿಗೆ: ನಾ ಏನಮ್ಮ ಹೇಳೋದಲ್ಲಿ ?......ಊಂ,....ಇದರ ಅಂಚು ಅದರ ಸೆರಗು ಚನ್ನಾಗಿದೆ....ಅಲ್ವೆ ?

**ತ್ರಿಪುರಾಂತಕಯ್ಯ** : ಹಾಗಾದ್ರೆ ಅವೆರಡೂ ಇದ್ಕೊಂಡ್ಹೋಗ಼್ಿ!

**ಸುಮಕೋಮಲ** : ಎರಡೂನೇ! ?....[ಸಂಭ್ರಮದಿಂದ]....ಹಾಗಾದ್ರೆ ಬೇಗ್ಹೋಗಿ ಬರೋಣ ಬನ್ನೀಂದ್ರೆ!—ಮಾಡರ್ನ್ ಹೋಟ್ಲಿಂದ ಬಂದ್ಮೇಲೆ ಇನ್ನೂ ಎಷ್ಟೋ ಇದೆ ಕೆಲಸ!—ಈ ಹೊಸ್ ಸೀರೇ ಉಟ್ಕೋಬೇಕೂ, ಸಿನಿಮಾಕ್ಹೋಗ್ಬೇಕೂ,....[ಎನ್ನುತ್ತ (ಯ) ನಿಲುವಿನ ಮೇಲಿರುವ ಎರಡು ಟವಲುಗಳನ್ನು ಕೈಚೀಲದಲ್ಲಿ ಹಾಕುತ್ತ,] ಈ ಟವಲುಗಳಿರಲಿ. [ಎಂದು ಚೀಲವನ್ನು ಗಂಡನ ಕೈಗೆ ಕೊಟ್ಟು,].... ನೀನೊಂದಿಷ್ಟ್ ತಕೋ ಅತ್ತಿಗೇ, ರಿಬ್ಬನ್ನೂ, ಬಳೇ!....[ಕೊಡುವುದಕ್ಕೆ ಹೋಗುವಳು.]

**ಲಕ್ಷಮ್ಮತ್ತಿಗೆ** : ಅವೆಲ್ಲಾ ಯಾಕಮ್ಮಾ?....ಕೊಡೋದಾದ್ರೆ ಆ ಬಣ್ಣದ ಗಿಳಿಗಳೆರಡೂ ಕೊಟ್ಟಿರು, ಆಮೇಲೆ ತಂದ್ಕೊಡ್ತೀನಿ.

**ಸುಮಕೋಮಲ** : ಹೌದು ಹೌದು! ಗಿಳಿ ತಕೊಂಡಿರು—ಬೇಕಾಗುತ್ತೆ! ಅಷ್ಟ್ ತೋಚ್ಲಿಲ್ಲ ನನಗೆ!....[ಎನ್ನುತ್ತ ಗಿಳಿಗಳನ್ನು ಕೊಡುವಳು.]

**ತ್ರಿಪುರಾಂತಕಯ್ಯ** : [ತನ್ನಲ್ಲಿ] ಹಾಗಾದ್ರೆ ಚನ್ನಾಗೇ ಫಲಿಸಿದೆ ಉಪಾಯಾ!

**ಸುಮಕೋಮಲ** : ಬನ್ನೀಂದ್ರೆ ಹೋಗೋಣ.

**ತ್ರಿಪುರಾಂತಕಯ್ಯ** : ಚಪ್ಲಿ ಹಾಕ್ಕೊಂಡಿರು ಹ್ಯಾಗಾದ್ರೂ ಆಗ್ಲಿ,—ತುಂಬಾ ಬಿಸ್ಲು ಹೊರಗೆ!

**ಸುಮಕೋಮಲ** : [ಚಪ್ಲಿ ಮೆಟ್ಟಿಕೊಂಡು, ಗಂಡನ ಜೊತೆಯಲ್ಲಿ ಕೈಕ್ಕೈ ತೆಕ್ಕೆ ಹಾಕಿಕೊಂಡು, (ಅ) ಬಾಗಿಲ ಕಡೆಗೆ ಹೋಗುತ್ತ, ಕುಶಾಲಾಗಿ ಮೆಲ್ಲನೆ ಹಾಡುವಳು :]

(ಹಾಡು)

ಅರಳುವ ಕ್ಕೋಮಲ ಮಂದಾರ ಸುಮದಾ।

[ನಿರ್ಗಮ (ಅ) : ಸುಮಕೋಮಲ ಮತ್ತು ತ್ರಿಪುರಾಂತಕಯ್ಯ.]

**ಲಕ್ಷಮ್ಮತ್ತಿಗೆ** : [ಅವರು ಹೋದ ಕಡೆಯೇ ಸ್ವಲ್ಪ ಹೊತ್ತು ನೋಡಿ, ನಿಡುಸುಯ್ದು, ತನ್ನಲ್ಲಿ :].... ಹೀಗಿರಬೇಕು ಗಂಡಾ ಹೆಂಡ್ತೀ ಅಂದ್ರೆ!....ಹೂಂ, ನ್ನಾವೂ ಸಂಸಾರಾ ಮಾಡ್ತಾ ಇದ್ದೇವೆ ವರ್ಷಗಟ್ಲೆ! ಏನ್ ಪ್ರಯೋಜ್ನ? ಗಂಡನ ಕೈಯಿಂದ ಆ ಏಟಿನ ಸುಖಾನ್ನೋದು ಒಂದು ದಿವಸವಾದ್ರೂ

ಲಭಿಸ್ಲಿಲ್ಲ ನನಗೆ!....ಏಟು ತಿಂದರೆ, ಆ ವಿಶ್ವಾಸ. ಆ ಪ್ರೇಮ, ಅವರ ನಮೂನೇನೇ ಬೇರೆ!.....ಅಯ್ಯೊ, ಹೊರಟೇ ಹೋದ್ರಲ್ಲಾ ಇವರೂ! ನಾನೀಗ ಹ್ಯಾಗ್ಹೋಗೋದು—ತಲಬಾಗ್ಲು ಹಾರುಬಿಟ್ಟೊ? ಅವರಿಗಿಂತಾ ಮುಂಚೆನೇ ಹೊರಟ್ಹೋಗ್ಬೇಕಾಗಿತ್ತು ನಾನು!—ಅಷ್ಟ ತೋಚ್ಲಿಲ್ಲ.....ಹ್ಯಾಗೆ ಹ್ಯಾಗೋ ಆಗಿಬಿಟ್ಟಿದೆ ಮನಸ್ಸು!....[ಎನ್ನುತ್ತ ಮೇಜಿನ ಕಡೆ ನೋಡಿ,]........ಬೀಗಾ ಬೀಗದಕೈ, ಇಲ್ಲೇ ಇವ್ಯಲ್ಲ ಸಧ್ಯ! ........[ಎನ್ನುತ್ತ ಬೀಗ, ಬೀಗದಕೈ ತೆಗೆದುಕೊಂಡು, (ಅ) ಬಾಗಿಲ ಕಡೆ ಹೋಗುತ್ತ,]........ಬೀಗಾ ಹಾಕ್ಕೊಂಡ್ಹೋಗಿರೋಣ—ಆಕೆ ಬಂದಾಗ ಕೊಟ್ರಾಯ್ತು ಬೀಗದಕೈ!.....[ಹೋಗುತ್ತಿರುವಳು (ಅ).]

[ಬೀದಿಯ ತೆರೆ ಬೀಳುವುದು.]

# ಅಂಕ ೪—ಇನ್ನೊಂದು ಬೀದಿ

[ನಕ್ಷೆ : ೨ನೆಯ ಅಂಕದಂತೆ]




[ಪ್ರವೇಶ (ಇ) : ಶಾಂತಪತಿ.]

[ಎಡಗೈಯಿಂದ ಕುಂಬಳಕಾಯಿ ಮತ್ತು ಚಾರ್ ಸೋಪುಗಳನ್ನು ಎದೆಗೆ ಅವಚಿಕೊಂಡಿರುವನು ; ಬಲಗೈಯಲ್ಲಿ ಒಂದು ಕಾಗದವನ್ನು ನೋಡುತ್ತ ನಿಧಾನವಾಗಿ ಪ್ರವೇಶಿಸುವನು.]

**ಶಾಂತಪತಿ :** [ತನ್ನಲ್ಲಿ] ಸದ್ಗುರುವೇ ಶಾಂತಾನಂದಾ !....[ಕಾಗದವನ್ನು ಮನಸ್ಸಿನಲ್ಲೇ ಓದಿಕೊಳ್ಳುತ್ತ (ಲ) ಎಂಬಲ್ಲಿ ನಿಲ್ಲುವನು.]

[ಪ್ರವೇಶ (ಅ) : ತ್ರಿಪುರಾಂತಕಯ್ಯ ಮತ್ತು ಸುಮುಕೋಮಲ.]

[ತ್ರಿಪುರಾಂತಕಯ್ಯನು ಕೈಚೀಲವನ್ನು ಹಿಡಿದಿರುವನು. ಸುಮುಕೋಮಲೆಯು ಚಪ್ಲಿ ಮೆಟ್ಟಿಕೊಂಡಿರುವಳು. ಶಾಂತಪತಿಯನ್ನು ಯಾರೂ ನೋಡುವುದಿಲ್ಲ. ಶಾಂತಪತಿಯೂ ಅವರ ಕಡೆ ನೋಡದೆ ಕಾಗದದಲ್ಲಿ ಮಗ್ನನಾಗಿರುವನು.]

**ತ್ರಿಪುರಾಂತಕಯ್ಯ :** [ಪ್ರವೇಶಿಸುತ್ತ, ಭಾವನನ್ನು ಕಾಣದೆ, ಹೆಂಡತಿಗೆ :] ....ಓಹೋ ಹಾಗಾದ್ರೆ "ಧರ್ಮಾವರದ ಸೀರೆ ಬೇಡಾ, ಬೆನಾರೆಸ್ ಸೀರೇನೇ ತರಬೇಕೂ, ಅದೂ ಈಗ್ಲೇ ತರಬೇಕೂ" ಅಂತ ಹಠಾ ಹಿಡಿದು ಜಗಳ ಪ್ರಾರಂಭಾ ಮಾಡೂಂತ ಹೇಳ್ಕೊಟ್ಟಿದ್ದೀಯೋ ನಿಮ್ಮ ತ್ರಿಗ್ಗೇ?! ....ಸರಿ ಸರಿ! .....[ಭಾವನ ಕಡೆ ನೋಡಿ ಗಾಬರಿಯಿಂದ, ಮೆಲ್ಲನೆ, ಹೆಂಡತಿಗೆ :] .....ಅಗೋ, ಭ ಭಾ, ಭಾವಾವ್ರು ! .....ಇದೊಳ್ಳೇ ಎಡವಟ್ಟಾಯ್ತಲ್ಲ ಹೀಗ್ಬಾ ಹೀಗ್ಬಾ !

[ತ್ರಿಪುರಾಂತಕಯ್ಯನು ಮುಖ ಮರೆಯಾಗುವಂತೆ ಹ್ಯಾಟನ್ನು ಹಣೆಯ ಮುಂದಕ್ಕೆ ಎಳೆದುಕೊಳ್ಳುವನು. ಸುಮುಕೋಮಲೆಯು ಸೀರೆಯ ಸೆರಗನ್ನು ತಲೆಯ ಮೇಲೆ ಹೊದೆದುಕೊಳ್ಳುವಳು. ಶಾಂತಪತಿಯ ಕಣ್ಣಿಗೆ ಬೀಳದಂತೆ,

ಅವನ ಹಿಂದುಗಡೆಯಿಂದ ಇಬ್ಬರೂ ಕಳ್ಳರಂತೆ ಮುಖ ಆಚೆಗೆ ತಿರುಗಿಸಿಕೊಂಡು, ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟುಕೊಂಡು, ಹಾದುಹೋಗಲು ಯತ್ನಿಸುವರು.]

ಶಾಂತಪತಿ : [ಅವರ ಕಡೆ ನೋಡಿ, ಅನುಮಾನಿಸಿ, ಮತ್ತೆ ಚನ್ನಾಗಿ ನೋಡಿ, ತನ್ನಲ್ಲಿ :]........ಅವರೇ ! !........ಈಗ್ತಾನೇ ಜಗಳಾ ಆಡ್ತಾ ಇದ್ದೋರು ಆಗ್ಲೇ ಸರಿಹೋಗಿಬಿಟ್ಟಿದಾರಲ್ಲಾ !........[ತಂಗಿಗೆ :].... ..... ಯಾರ್,....ಸುಮುಕೋಮಲಮ್ಮಾ,....

ಸುಮುಕೋಮಲ : [ಯತ್ನವಿಲ್ಲದೆ]....ಅಗೋ ಅಣ್ಣ ! !....[ಎಂದು (ರ) ಎಂಬಲ್ಲಿ ನಿಲ್ಲುವಳು.]

ತ್ರಿಪುರಾಂತಕಯ್ಯ : [ಯತ್ನವಿಲ್ಲದೆ :]....ಓಹೋ, ಭಾವಾವ್ರ ! !.... ನಮಸ್ಕಾರಾ ಭಾವಾ ! ...[ಎನ್ನುತ್ತ ಬಂದು, (ಯ) ಎಂಬಲ್ಲಿ ನಿಲ್ಲುವನು.]

ಶಾಂತಪತಿ : ನಮಸ್ಕಾರ !........ಎಲ್ಲೀಗೋ ಹೊರಟಿದ್ದೀರಲ್ಲಾ ಇಬ್ರೂ !

ತ್ರಿಪುರಾಂತಕಯ್ಯ : ಪೆಪೆಪ್ಪೇಟೇಲಿ .... ಸ್ವಲ್ಪಾ....ಕೆಕೆಕ್ಕೆಲ್ಸಾ ಇತ್ತೂ ಊ !....ಅಂಚೇಲಿ ಬಂತೋ ಆ ಕಾಗದಾ ?

ಶಾಂತಪತಿ : ಇದೇ ? ಊಂ, ನಿನ್ನೇನೇ ಬಂತು. ಇನ್ನೊಂದ್ಸಲ ಹಾಗೇ ನೋಡ್ತಾ ಇದ್ದೆ !....[ಎನ್ನುತ್ತ ಕಾಗದವನ್ನು ತ್ರಿಪುರಾಂತಕಯ್ಯನಿಗೆ ಕೊಡುವನು.]

ತ್ರಿಪುರಾಂತಕಯ್ಯ : [ಕಾಗದವನ್ನು ನಿಧಾನವಾಗಿ, ಸ್ಪಷ್ಟವಾಗಿ, ಗಟ್ಟಿಯಾಗಿ ಓದುವನು ;]

" ಶ್ರೀಮಾನ್ ಶಾಂತಪತಯ್ಯನವರಿಗೆ. ಶಾಂತಿಪ್ರಚಾರಕನಿಂದ : ವಿಜ್ಞಾಪನೆಗಳು.

" ಪ್ರಪಂಚದಲ್ಲಿ ಶಾಂತಿಯು ಹೊರತು ಸುಖವಿಲ್ಲವಷ್ಟೆ ! ಆದ್ದರಿಂದ. ಪ್ರತಿಯೊಬ್ಬ ಮನುಷ್ಯನೂ, ಕೋಪತಾಪಗಳನ್ನು ಕೈಬಿಟ್ಟು, ಶಾಂತಿಸಾಧನೆ ಮಾಡಬೇಕಾದ್ದು ಅವಶ್ಯಕವಾಗಿರುತ್ತೆ. ಶಾಂತಿಸಾಧನೆಗೆ ಅತ್ಯಂತ ಸುಲಭಮಾರ್ಗವೆಂದರೆ, ಶಾಂತಿಕೋಟಿಯನ್ನು ಬರೆಯುವುದೇ ಆಗಿದೆ; ಎಂದರೆ, ರಾಮ ರಾಮ ರಾಮ ......ಎಂದು ರಾಮಕೋಟಿಯನ್ನು ಬರೆಯುವ ಹಾಗೆ, ಶಾಂತಿ

ಶಾಂತಿ ಶಾಂತಿ....ಎಂದು ಕೋಟಿಸಲ ಬರೆಯುವುದು.

**ಸುಮಕೋಮಲ :** [ಜೊತೆಗೆ ಓದುವಳು :] "ಈ ಮೂಲಕ ನಿಮಗೆ ತಿಳಿಯಪಡಿ...."

**ತ್ರಿಪುರಾಂತಕಯ್ಯ :** ತಾಳು ಸ್ವಲ್ಪ.

**ಸುಮಕೋಮಲ :** ನಾನೂ ಓತ್ತೀನಿ.

**ತ್ರಿಪುರಾಂತಕಯ್ಯ :** ಸ್ವಲ್ಪ ಹೊತ್ತು ಸುಮ್ಮನೇ ಇರು ಗಂಭೀರವಾಗಿ....[ಓದುವನು.] "ಈ ಮೂಲಕ ನಿಮಗೆ ತಿಳಿಯಪಡಿಸುವುದೇನೆಂದರೆ: ಈ ಕಾಗದ ತಲುಪಿದ ಆರು ತಿಂಗಳೊಳಗಾಗಿ, ನೀವು, ಈ ಮೇಲೆ ವಿವರಿಸಿರುವಂತೆ ಶಾಂತಿಕೋಟಿಯನ್ನು ಬರೆದು ಮುಗಿಸತಕ್ಕದ್ದು. ಇದರಿಂದ ಇಹಪರಗಳಲ್ಲೂ ನಿಮಗೆ ಶಾಂತಿ ಸುಖವು ಲಭಿಸುವುದು. ಬರೆಯುವಾಗ ಗಟ್ಟಿಯಾಗಿ ಹೇಳಿಕೊಂಡು ಬರೆದರೆ ಫಲ ಹೆಚ್ಚು.

"ಅಲ್ಲದೆ, ಶಾಂತಿ ಪ್ರಚಾರಾರ್ಥವಾಗಿ, ನೀವು, ಈ ಕಾಗದ ತಲುಪಿದ ಮೂರು ದಿನಗಳೊಳಗಾಗಿ, ಈ ಕಾಗದದ ಒಂಭತ್ತು ನಕಲುಗಳನ್ನು ತಯಾರಿಸಿ, ನಿಮಗೆ ಪರಿಚಿತರಾದ ಒಂಭತ್ತು ಜನ ಆಸ್ತಿಕ ಮಹಾಶಯರಿಗೆ ರವಾನಿಸತಕ್ಕದ್ದು.

"ಹೀಗೆ ಮಾಡುವುದರಿಂದ ನಿಮಗೆ ತುಂಬಾ ಒಳ್ಳೆಯದಾಗುವುದು. ಉಪೇಕ್ಷೆ ಮಾಡಬಾರದು. "

ಇಂತು ವಿಜ್ಞಾಪನೆಗಳು,
"ಶಾಂತಿ ಪ್ರಚಾರಕ."

[ಕಾಗದವನ್ನು ವಾಪ್ಸು ಕೊಡುತ್ತ,] ಈ ಶಾಂತಿ ಪ್ರಚಾರಕರು ಯಾರು ಭಾವಾ ?

**ಶಾತಂಪತಿ :** ಅದು ನನಗೂ ಪತ್ತೆ ಆಗಿಲ್ಲ!....ಯಾರಾದ್ರೂ ಆಗ್ಲಿ ಒಳ್ಳೇ ಮಾತು ಬರೆದಿದಾರೆ! ಅದರಂತೆ ನಡಕೊಂಡ್ರೆ ಅಯ್ತು! ಅದಕ್ಕೆ ನಾವೇನು ಸವೆಕೋಬೇಕಾಗಿದೆ? ಶಾಂತಿಸಾಧನೆಗೆ ಸುಲಭವಾದ ಮಾರ್ಗ ......ಅಲ್ವೆ, "ಉಪೇಕ್ಷೆ ಮಾಡಬಾರದು" ಅನ್ನೋ ಮಾತು ಬೇರೇ ಇದೆ ಅದರಲ್ಲಿ!

ತ್ರಿಪುರಾಂತಕಯ್ಯ : ನೀವೇನಾದ್ರೂ ಹೇಳೀ ಭಾವಾ,....ಸಂಸಾರಾ ಕಟ್ಟಿಕೊಂಡಿರೋರಿಗೆ, ಈ ಕೋಪದಮನ, ಶಾಂತಿಸಾಧನೆ, ಮುಂತಾದ್ದೆಲ್ಲಾ ನಿಜವಾಗಿ ಸಾಧ್ಯವೇ ಅಂತ ಅನುಮಾನ ನನಗೆ!

ಶಾಂತಪತಿ: ಏನೋ ನಮ್ಮ ಕೈಲಾದ ಮಟ್ಟಿಗೆ ಮಾಡೋದು. ಆದ್ರೂ ಉಪ್ಪು, ಹುಳಿ, ಖಾರ, ಬೀಳೋ ದೇಹಕ್ಕೆ ಕೋಪ ಅನ್ನೋದು ಬರದೇ ಇರೋದಿಲ್ಲ—ಒಂದೊಂದ್ಸಲ ಮಿತಿಮೀರೇ ಬರುತ್ತೆ! ಅದು ಬಂದಾಗ ಅದನ್ನ ಹತೋಟೀಗೆ ತಂದುಕೊಂಡು ಶಾಂತಿ ಸಾಧನೆ ಮಾಡಬೇಕು! ಅದಕ್ಕೆ ಈ ಶಾಂತಿಕೋಟಿ ಬರೆಯೋದೂ ಒಳ್ಳೇ ಸಾಧನವೇ ಸರಿ ಅಂತ ಅನ್ಸುತ್ತೆ ನನಗೆ!

ತ್ರಿಪುರಾಂತಕಯ್ಯ : ಹಾಗಾದ್ರೆ ತಾವು ಶಾಂತಿಕೋಟೀ ಬರೀತೀರೀಂತ ಆಯ್ತು!

ಶಾಂತಪತಿ : ಹೂಂ; ಈ ಹೊತ್ತೇ ಪ್ರಾರಂಭಾ ಮಾಡೋಣಾಂತ ಇದೀನಿ.

ತ್ರಿಪುರಾಂತಕಯ್ಯ : ಏತನ್ಮಧ್ಯೆ ಆ ಒಂಭತ್ತು ಕಾಗದಾ ಬೇರೇ ಬರೀಬೇಕೇನೋ!

ಶಾಂತಪತಿ : ಆಗ್ಲೇ ಬರೆದು ಅಂಚೆಗ್ಹಾಕಿಬಿಟ್ಟೆ: ಅದಕ್ಕೋಸ್ಕರವೇ ಈಗ ಪೇಟೆಗ್ಹೋಗಿದ್ದು.

ಸುಮಕೋಮಲ : ಪೇಟೆಯಿಂದ ಏನೇನೋ ತಂದಿದೀಯಲ್ಲಣ್ಣಾ! ......ಚನ್ನಾಗಿದೆ ಕುಂಬಳಕಾಯಿ! ಎಷ್ಟು ಬೆಲೆ?

ಶಾಂತಪತಿ : ಈಗಿನ ಬೆಲೆಗಳು ಏನ್ಹೇಳ್ತೀಯಮ್ಮಾ?....ಹಿಂದೆ ಇದ್ರೆ ಕುಂಬಳಕಾಯಿ ಮೂರಾಣೀಗೆ ಎರಡು ಬರ್ತಾ ಇತ್ತು! ಅಂಥಾದ್ದು ಈಗ ಹನ್ನೊಂದೂಮುಕ್ಕಾಲಾಣೀಗೆ ಒಂದು ಕುದುರಿಸೋದಕ್ಕೆ ಅರ್ಧ ಘಂಟೆ ಬೇಕಾಯ್ತು! ಯಾವ ಪದಾರ್ಥವಾದರೂ ಅಷ್ಟೆ! ಧಾರಣೆವಾಸಿ ತುಂಬಾ ಏರಿಬಿಟ್ಟಿದೆ!

ತ್ರಿಪುರಾಂತಕಯ್ಯ : [ಸ್ವಲ್ಪ ಯೋಚಿಸಿ] ಈ ಧಾರಣೆವಾಸಿ ಬಾಳಾದಿನ ಇರೋದಿಲ್ಲಾನ್ನಿ. ಈಗ ನೋಡೀ, ಬೆನಾರೆಸ್ ಸೀರೇ ಧಾರಣೆ ಹೇಳೋ ಹಾಗೇ ಇಲ್ಲ! ಆದ್ರೆ ಮುಂದಿನ ತಿಂಗಳು ಬೆನಾರೆಸ್‌ನಿಂದ ಹೊಸ

ರಖಂ ಸೀರೆ ಯಥೇಚ್ಛವಾಗಿ ಬರುತ್ತಂತೆ! ಆಗ ಧಾರಣೇನೂ ಅರ್ಧ ಕ್ಕರ್ಧ ಇಳಿಯುತ್ತೆ ಅಂತ ಹೇಳ್ತಾ ಇದಾರೆ—ವದಂತಿ!

ಶಾಂತಪತಿ : ಹಾಗೇನು ?!

ತ್ರಿಪುರಾಂತಕಯ್ಯ : ಹೂಂ!....ಯಾಕೆ? ಬೆನಾರೆಸ್ ಸೀರೆ ತಕೋ ಬೇಕಾಗಿತ್ತೇನು ನೀವು?

ಶಾಂತಪತಿ : ಕೇಳ್ತಾ ಇದಾಳೆ ಮನೇಲೀ. ಆದ್ರೆ ನಾನು ಆದರ ಬದ್ಲು ಧರ್ಮಾವರದ ಸೀರೇ ತಕೋ ಅಂತ ಹೇಳ್ತಾ ಇದೀನಿ.

ತ್ರಿಪುರಾಂತಕಯ್ಯ : ಧರ್ಮಾವರದ್ದೇ ಸರೀ ಭಾವಾ! ಆ ಬಣ್ಣ, ಆ ಧಡೂತಿ, ಇನ್ನ್ಯಾವುದಕ್ಕೂ ಬರೋದಿಲ್ಲ! ಬೆನಾರೆಸ್ ಸೀರೆ ಬರೀ ಥಳಕು! ಅದನ್ನು ಒಂದ್ಸಲ ನೀರಿಗ್ಹಾಕಿದರೆ ಆಮೇಲೆ ಅದು ಯಾತಕ್ಕೂ ಬರೋದಿಲ್ಲ!....ಒಂದ್ವೇಳೆ ಬೆನಾರೆಸ್ ಸೀರೇನೇ ತಕೋಬೇಕಾದಾಗ್ಯೂ ಸಹ, ಈಗಂತೂ ಖಂಡಿತ ಬೇಡಿ—ಹೊಸ ರಖಂ ಬರೋತನಕ ಸುಮ್ಮನೆ ಇರಿ. [ಎಂದು ಹೆಂಡತಿಯ ಕಡೆ ನೋಡಿ ಕಣ್ಣು ಮಿಟುಕಿಸುವನು]

ಸುಮುಕೋಮಲ : ಹಾಗೇ ಮಾಡಣ್ಣ!—ಇವರಿಗೆ ಬಜಾರ್ ಸಮಾಚಾರ ಎಲ್ಲಾ ಚನ್ನಾಗಿ ಗೊತ್ತು!

ಶಾಂತಪತಿ : ಹಾಗೇ ಆಯ್ತು! ಅವಳೂನೂ ತುರ್ತಾಗಿ ಈಗ್ಲೇ ಆಗಬೇಕು ಅಂತ ಏನೂ ಹೇಳ್ತಾ ಇಲ್ಲಾನ್ನು.....ಒಳ್ಗೇದಮ್ಮ, ಬಿಸ್ಲಲ್ಲಿ ನಿಂತಿದ್ದೀ, ಹೋಗಿಬಿಟ್ಟು ಬಾ. ನಾನೂ ಹೋಗ್ತೀನಿ. ಹೋಗೀ, ಮೂರು ಘಂಟೀ ಒಳಗಾಗಿ ಶಾಂತಿಕೋಟೀ ಪ್ರಾರಂಭಾ ಮಾಡಬೇಕು. ಯಾಕೇಂದ್ರೇ, ಈ ಹೊತ್ತು ಭಾನುವಾರ; ಮೂರು ಘಂಟೆಯಿಂದ ನಾಲ್ಕೂವರೆ ವರೆಗೆ ಗುಳಿಕ ಕಾಲ; ಅದಾಗುತ್ಲೂ ನಾಲ್ಕೂವರೆಯಿಂದ ಆರು ಘಂಟೇವರೆಗೆ ರಾಹುಕಾಲ. ಆದ್ರಿಂದ ಮೂರು ಘಂಟೇ ಒಳ ಗಾಗೇ ಪ್ರಾರಂಭಾ ಮಾಡಬೇಕು. ಅಲ್ದೆ, ಆಮೇಲೆ ವೆಂಕಟ್ರಮಣ ಸ್ವಾಮಿ ದೇವಸ್ಥಾನದಲ್ಲಿ ಹರಿಕಥೆ ನಡೆಯುತ್ತಂತೆ–ಹೋಗಿಬರಬೇಕು. ....ನಿವೂ ಏನೋ ಕೆಲಸದ ಮೇಲೆ ಹೊರಟಿರೋ ಹಾಗಿದೆ; ಹೋಗ್ಬಿಟ್ಬನ್ನಿ.

ತ್ರಿಪುರಾಂತಕಯ್ಯ : ನಮಸ್ಕಾರಾ ಭಾವಾ........ಆ ಮೇಲೆ,ಬಂದು ಮತ್ತೆ ಕಾಣ್ತೇನಿ.

ಶಾಂತಪತಿ : ಆಗ್಩ಿ ಆಗ್ಲಿ, ನಮಸ್ಕಾರ........[ಎನ್ನುತ್ತ (ಅ) ಕಡೆಗೆ ಹೋಗುತ್ತಿರುವನು.]

ತ್ರಿಪುರಾಂತಕಯ್ಯ : [ಹೆಂಡತಿಯೊಡನೆ (ಇ) ಕಡೆಗೆ ಹೋಗುತ್ತ, (ಲ) ಎಂಬಲ್ಲಿ ನಿಂತು ಹಿಂದಿರುಗಿ, ಭಾವನಿಗೆ ಗಟ್ಟಿಯಾಗಿ:].........ಸೀರೇ ವಿಚಾರಾ, ....ನಾ ಹೇಳಿದ್ದೂ,....ಜ್ಞಾಪಕಾ....

ಶಾಂತಪತಿ : ಜ್ಞಾಪಕಾ ಇದೆ, ಜ್ಞಾಪಕಾ ಇದೆ....[ತನ್ನಲ್ಲಿ:] ಸ್ಸದ್ಗುರುವೇ, ಶಾಂತಾನಂದಾ!

[ನಿರ್ಗಮ (ಅ) : ಶಾಂತಪತಿ.]

ತ್ರಿಪುರಾಂತಕಯ್ಯ : ಇಲ್ಲೀಗೆ ಇವರ ವ್ಯಾಜ್ಯಕ್ಕೆ ತಳಹದಿ ಸಂಪೂರ್ಣವಾದ್ಹಾಗಾಯ್ತು! ಈಗ ಈತ ಮನೆಗ್ಹೋಗುತ್ಲೂ, ಈತನ ಶಾಂತಿ ಸಾಧನೆ ಗೆಲ್ಲುತ್ತೋ, ಅಥ್ವಾ ಆಕೇ ಕಲಹಸಾಧನೆ ಗೆಲ್ಲುತ್ತೋ ನೋಡಬೇಕು!

ಸುಮಕೋಮಲ : ನೋಡೋದಿನ್ನೇನು, ಕಂಡ್ಹಾಗೇ ಇದೆ! ಬೆನಾರೆಸ್ ಸೀರೆ ಈಗ್ಲೇ ಕೇಳು ಅಂತ ಆಕೀಗೆ ನಾನು ಹೇಳಿಕೊಟ್ಟಿದೀನಿ; ಅದು ಈಗ ಬೇಡ ಅಂತ ಈತನಿಗೆ ನೀವು ಹೇಳಿಕೊಟ್ಟಿದೀರಿ! ಇನ್ನು ಜಗಳ ಆಗದೆ ಹ್ಯಾಗಿರುತ್ತೆ?......ಅಲ್ದೆ, ಆಕೀ ಗಿಳೀ ಬೇರೇ ತಕೊಂಡ್ಹೋಗಿದ್ದಾಳೆ! ಜಗಳ ಆಗೋತನಕ ಬಿಡೋದಿಲ್ಲ ಆಕಿ! ಇನ್ನು, ಈತನ ಶಾಂತಿಸಾಧನೇ ತಾನೇ? ಇಷ್ಟು ಶಾಂತಿ ಇರೋರಿಗೆ ಸಿಟ್ಟು ಬಂದ್ರೆ ತುಂಬಾ ಕಷ್ಟಾಂದ್ರೇ! ನಮ್ಮನ್ನ ಹಂಗ್ಸಿದ್ದಕ್ಕೆ ಆಕೀಗೆ ತಕ್ ಪ್ರಾಯಶ್ಚಿತ್ತ ಆಗಬೇಕಾದ್ದೇನೋ ನ್ಯಾಯವೇ ಆದ್ರೂ, ಈತನಿಗೆ ಮಿತಿ ಮೀರಿ ಸಿಟ್ಟು ಬಂದ್ರೆ ಆಕೀ ಗತಿ ಏನೋ ಎಂತೋ ಈ ಹೊತ್ತೂ ಅಂತ ತುಂಬಾ ಭಯವಾಗುತ್ತೆ ನನಗೆ!

ತ್ರಿಪುರಾಂತಕಯ್ಯ : ಅದೂ ನಿಜವೇ! ಎಂದೂ ಸಿಟ್ಟು ಬರದೇ ಇರೋರಿಗೆ ಸಿಟ್ಟು ಬಂದ್ರೆ ಮುಂಗಾರು ಸಿಡ್ಲು ಬಂದ್ಹಾಗೇನೇ!.......... ಒಂದ್ವೇಳೆ ಈತ ಆಕೀನ ಹೊಡೆದು ಮನೇ ಬಿಟ್ಟು ಓಡಿಸಿಬಿಟ್ರೆ ಏನ್ಮಾಡೋದಾಮೇಲೆ?! ಆದ್ರಿಂದ, ಜಗಳ ಅಷ್ಟು ದೂರ ಹೋಗದ್ಹಾಗೆ ನೋಡಿಕೋಬೇಕು ನಾವು!....ಬಾ, ಜಾಗ್ರತೆ ಮಾಡರ್ನ್ ಹೋಟ್ಲೆ

ಗ್ಹೋಗಿ ಬಂದ್ಬಿಡೋಣ !....[ಹೆಂಡತಿಯೊಡನೆ (ಇ) ಕಡೆಗೆ ಹೋಗುತ್ತ, ಕಿರುನಗೆಯಿಂದ]....ಒಳ್ಳೇ ಭಾವ! ಒಂಭತ್ತು ಕಾಗದಾ ಬರೆದ್ಹಾಕಿದ ನಂತೆ! ಶಾಂತಿಕೋಟೇ ಬೇರೇ ಬರೀತಾನಂತೆ!! ನಮ್ಮಜ್ಜನ ತಲೆ!!!

[ನಿರ್ಗಮ (ಇ): ತ್ರಿಪುರಾಂತಕಯ್ಯ ಮತ್ತು ಸುಮಕೋಮಲ.]

[ಬೀದಿಯ ತೆರೆ ಏಳುವುದು]

## ಅಂಕ ೩—ಶಾಂತಪತಿಯ ಮನೆಯ ಪಡಸಾಲೆ

ಆದರ ನಕ್ಷೆ ಹೀಗಿದೆ :




**ಅ** : ಹೊರ ಬಾಗಿಲು.

**ಇ** : ಒಳಬಾಗಿಲು

**ಉ** : ಇನ್ನೊಂದು ಒಳಬಾಗಿಲು. ತೆರೆ ಹಾಕಿದೆ.

**ಒ** : ಕಿಟಕಿ

**ಕ** : ಮಡಿಸುವ ಕುರ್ಚಿ

**ಚ** : ಮೇಜು. ವಸ್ತ್ರ ಹೊದಿಸಿದೆ. ಇದರ ಮೇಲೆ ಒಂದು ಎಕ್ಸರ್‌ಸೈಜು ಪುಸ್ತಕ ಮತ್ತು ಪೆನ್ಸಿಲ್ ಇವೆ.

**ಟ** : ಆರಾಮ ಕುರ್ಚಿ

**ತ** : ಸ್ಟೂಲು, ವಸ್ತ್ರ ಹೊದಿಸಿದೆ. ಇದರ ಮೇಲೆ ಒಂದು ಬಿದಿರಿನ ಬುಟ್ಟಿ, ಒಂದು ಜೊತೆ ಬಣ್ಣದ ಗಿಳಿಗಳು, ಬೀಸಣಿಗೆ, ಮತ್ತು ಬೀಗದ ಕೈ, ಇವೆ.

**ಪ** : ಉಡುಪಿನ ನಿಲುವು. ಇದರ ಮೇಲೆ ದೊಡ್ಡ ಅಂಚಿನ ಮಾಸಿದ ಸೀರೆಯೊಂದು ನಿರಿ ಹಿಡಿದು ಹಾಕಿದೆ.

**ಯ** : ಮಡಿ ಒಣಗು ಹಾಕುವ ಉದ್ದನಾದ ಬಿದಿರಿನ ದಂಡೆ—ಬೆತ್ತಕ್ಕೆ ಎಟುಕು ವಷ್ಟು ಎತ್ತರದಲ್ಲಿ ಕಟ್ಟಿದೆ.

**ರ, ಲ, ವ, ಶ** : ಸ್ಥಳ ಸಂಕೇತಗಳು.

ಎದುರು ಗೋಡೆಗೆ ಚಿತ್ರಪಠ, ತಾರೀಖುಪಟ್ಟಿ, ಇವೆ.]

[ಲಕ್ಷಮ್ಮತ್ತಿಗೆ]

[ತೆರೆ ಎದ್ದಾಗ, ಲಕ್ಷಮ್ಮನು ಕಾತುರದಿಂದ ಕೈ ಹಿಸುಕಿಕೊಳ್ಳುತ್ತ, (ರ) (ಲ) ಗಳ ಮಧ್ಯೆ ಶತಪಥ ಹಾಕುತ್ತಿರುವಳು.]

ಲಕ್ಷಮ್ಮತ್ತಿಗೆ : [(ಅ) ಬಾಗಿಲ ಬಳಿಗೆ ಹೋಗಿ ನೋಡಿ ಬಂದು, (ಶ) ಎಂಬಲ್ಲಿ ನಿಂತು, ಬುಸುಗುಟ್ಟಿ, ಉದ್ವೇಗದಿಂದ ಸ್ವಲ್ಪ ನಡುಗುವ ಧ್ವನಿಯಲ್ಲಿ :] ....ಇಲ್ಲ,....ಬರ್ಲಿಲ್ಲ,....ಇನ್ನೂ ಬರ್ಲಿಲ್ಲ ಪೇಟೆಯಿಂದ!.... ಹೌದು,.... ಆಗಿದೆ,.... ಒಂದು ನಿಮಿಷ ಅನ್ನೋದು ಒಂದು ಯುಗ ಆಗಿದೆ!.... ನನ್ನ ಮನಸ್ಸೋ,.... ಹಾತೊರೀತಾ ಇದೆ—ಯಾವಾಗ ಬಂದಾರೊ, ಏಟಿನ ಸುಖ ಯಾವಾಗ ಲಭಿಸೀತೂಂತ ಹಾತೋರೀತಾ ಇದೆ! ....ಬೇಡ, ತಲ್ಲಣಿಸಬೇಡ—ಮನಸ್ಸೇ, ನಿಧಾನಾ ತಂದ್ಕೋ!.... ಆದ್ರೆ,....ಬರ್ತಾರೆಯೋ,........ನಿಜವಾಗಿ ಬರ್ತಾರೆಯೋ,........ಬರ್ತಾರೆಯೋ ಜಗಳಕ್ಕೆ ನಮ್ಮೋರು?....ಹುಂ, ಅದ್ ಬೇರೆ ಬರೀತಾರಂತೆ—ಶ್ಯಾಂತಿ ಕೋಟೆ! ....ಕಾಣೆ, ಯ್ಯಾಕ್ಹೀಗ್ಮಾಡ್ತಾರೋ ಕಾಣೆ....ಅವರ ತಪ್ಪೇನು ಪಾಪ? ನ್ಯಾನು ಪಡಕೊಂಡು ಬಂದಿರಬೇಕಲ್ಲ ಮುಖ್ಯವಾಗಿ!....ನ್ನೋಡೋಣ, ಎಂದಿಗೆ ಬುದ್ಧೀ ಹುಟ್ಟುತ್ತೋ ಅವರಿಗೆ!.... ....ಆದ್ರೆ,....ಆದ್ರೆ,........ ನೋಡೋಣಾಂತ ಸುಮ್ನೇಲೇ ಇದ್‌ಬಿಟ್ರೆ, ಈ ಜನ್ಮ ಹೀಗೇ ಕಳೆದ್ಹೋಗುತ್ತೆ!—ನಾವೇನು ಸಾರೋದ್ಧಾರಾ ಬದುಕಿರ್ತೀವ್ಯೇ?......... ಉಹುಂ, ಬಿಡಬೇಕು, ಈಗವರು ಮನೆಗೆ ಬರುತ್ಲೂ ಏನಾದ್ರು ಮಾಡಿ ಚನ್ನಾಗಿ ರೇಗಿಸಿಬಿಡಬೇಕು!........[ಗಾಳಿಯಲ್ಲಿ ನಟ್ಟ ದೃಷ್ಟಿಯಿಂದ :].... ರೇಗಿದಾಗ, ಹ್ಯಾಗಿರಬಹುದು ಅವರ ಮುಖ?....[ಕುಪಿತನಾದ ಪತಿಯ ಚಿತ್ರವನ್ನು ಕಣ್ಣುಮುಂದೆ ಭಾವಿಸಿಕೊಂಡು, ಕಿರುನಗೆಯಿಂದ]........ಆ ಕಣ್ಣಿನ ಮಿಂಚು,......ಸಿಟ್ಟಿನಿಂದ ಅಲುಗುವ ಆ ಕ್ರಾಪಿನ ಮುಂಗುರುಳು,....ಆ ಮಾತಿನ ಮಳೆ,....ಆ ಸಿಡುಕು, ಆ ಮುಡುಕು, ಆ ಬೆತ್ತ—ಬಿದಿರಿನ ಬೆತ್ತ!....[ಸ್ಟೂಲಿನ ಮೇಲಿರುವ ಬೆತ್ತವನ್ನು ತೆಗೆದುಕೊಂಡು, ಅದನ್ನು ಸಂಬೋಧಿಸುತ್ತ,]........ಎಲೈ ಆಪ್ತನೇ,........ನಿನ್ನಲ್ಲೇ ಅಲ್ಲವೆ ಇರೋದು— ಬತ್ತಾಸು, ಮಿಠಾಯಿ?! ಆದರೆ ಈಗ ನಾನು ನಿನ್ನ ಕೇಳೋದು ಬತ್ತಾಸೂ ಅಲ್ಲ, ಮಿಠಾಯೂ ಅಲ್ಲ, ಬಾಸುಂದಿಯೂ ಅಲ್ಲ,........ಆದರೆ

ಬಾಸುಂಡಿ!—ಹೌದು, ಈ ರಟ್ಟೀ ಮೇಲೆ,........ಕೆಂಪಗೆ,........ಸಂಜೇ ಸೂರ್ಯನ ಬಣ್ಣಕ್ಕೆ ಬಾಸುಂಡಿ!....ಅಲ್ಲದೆ, ಹಣೇ ಮೇಲೆ ಬೋರು! —ನಿಜವಾದ ಬೋರು, ನಿಂಬೇಹಣ್ಣಿನ ಗಾತ್ರಕ್ಕೆ!....ನಿನ್ನ ದಯದಿಂದ ಈಹೊತ್ತು ಇಷ್ಟು ಮಾತ್ರ ಆದರೆ, ಆಮೇಲೆ,....[ಚಿತ್ತವನ್ನು ಸ್ಟೂಲಿನ ಮೇಲಿಟ್ಟು, ಗಿಳಿಗಳನ್ನು ತೆಗೆದುಕೊಂಡು,]....ಆಹಾ,........ಅರಗಿಳಿಗಳೇ,.... ಬ್ಬೇಕು,....ಮಾತಾಡಬೇಕು,....ನಿಮ್ಮ ಸಂಗಡ ಅಕ್ಕರೆಯ ಮಾತಾಡ ಬೇಕು!....[ಗಿಳಿಗಳನ್ನು ಸ್ಟೂಲಿನ ಮೇಲಿಟ್ಟು,]........ಮನಸ್ಸಿನಲ್ಲೀ,........ ಅದೇನೋ ಪಳ, ಅದೇನೋ ಬಲ, ಅದೇನೋ ಹಲ!.... ಹೌದು ಕಳ ವಳ,....ಹಂಬಲ,....ಕುತೂಹಲ—ಕಲಹ ಕುತೂಹಲ!........[ಎಂದು, ಕೂಡಲೆ, ಈ ಕೆಳಗಿನ ಹಾಡನ್ನು ಪ್ರಾರಂಭಿಸಿ, ಸ್ಪಷ್ಟವಾಗಿ ಹಾಡುವಳು. ತೆರೆಯ ಹಿಂದೆ ವಯೊಲಿನ್ ನುಡಿಸಬಹುದು.]

(ಹಾಡು *)

ಕಲಹ ಕುತೂಊ—ಹಲ ಮನ್ಮನದೀ
ಕಲಹಾಪೇಕ್ಷೆಯೊ—ಳತಿ ಮುದದೀ
—ಕಲಹವ ಬೆಳೆಸುವೆ ಕಾಂತನಲೀ ॥

---

* [ನಾಗಸ್ವರ—ಆದಿತಾಳ.
(ಕೇಶವ ಬಾ—ಮದುಸೂದನ ಬಾ
ಬಾಬಾರೋ ಶೌರೇ,—ಶ್ರೀಲೋಲಾ ಆಶ್ರಿತಪಾಲಾ ॥ ಎಂಬಂತೆ.)
ಸರೀ ಸರೀ ನೀೀೀ—(ಸರಿ) (ಗಾಮಗ) ರಿ (ಸ್ಸನಿ) ಸಾ ।
ಸರೀ ಮಮ್ಮ ಮಾಮ್ಮ (ಮಪಮಗ)—ಗಮಾಗರೀ (ನಿಸನಿಸ) ರೀ
ಸರೀ ಸರೀ ನೀೀೀ—(ಸರಿ) (ಗಾಮಗ) ರಿ (ಸ್ಸನಿ) ಸಾ ॥
ಸರೀ ಮಮ್ಮ ಮಾಮ್ಮರೀೀ—ರಿಮಾಪಪ್ಪ ಪಾಪ್ಪ (ಪಧಪಮ)
ಗಾಗ್ಗಮ ಗಾರಿ (ರ್ರಿಗರಿಸ)ನ್ನಿ ಸಾರಿ ಸಾರೀ
ಗಾ, ರಿ ಸಾನೀೀೀ—ಸರಿ (ಗಾಮಗ)ರಿ (ಸ್ಸನಿಸಾ)
ಗಾ, ರಿಸಾನೀೀೀ—ಸರಿ (ಗಾಮಗ) ರಿ(ಸ್ಸನ್ನಿಸಾ)
ನ್ನಿಸರಿರ್ರಿ, ರೀೀ (ರೀರಿಗರಿಸ)—ರಿಸಾನಿಪಾ ನೀಸಾರೀಗಾ
(ಗಮಗರಿಸನಿ) ಸಾ ॥

ಎಂದಿಗೆ ಕಾಂಬೆನೋ — ತಾಡನ ಸುಖವನೂ
ಕಾಂತನ ಕೋಪದಾ — ಕೃಪೆಯಿಂದಾ
ಬಾ ಪ್ರಿಯನೇ೯೯೯ — ಜಗಳಾಡುವ ಬಾ
ಓ ಸಖನೇ ೯೯ — ವಾಗ್ವಾದಕೆ ಬಾ
ಬಾಬಾರೊ ಶೌರೀ, ದಯದೋರೀ ನೀ೯೯ ಕಲಹಕೆ ಬಾ॥
ಸಿಡುಕುತ ಬಾ — ದುಡುಕುತ ಬಾ
ಕೋಪದಿಮುಂ — ಗುರುಳಲುಗಿಸಿ ಬಾ
ಕಣ್ಣಲಿ ಮಿಂ — ಚನು ಹೊಳೆಸುತ ಬಾ
ಮಾತಿನ ಮಳೆಯನು—ಸುರಿಸುತ ಬಾ॥
ಅರಗಿಳಿಯೊಡನೇ — ಅಕ್ಕರೆ ನುಡಿಯಲೂ
ಹಾತೊರೆಯುತಲಿದೇ — ಮಾನಸವೂ
ಬೇತ್ರವನೂ, — ಪಿಡಿದೇತ್ತುತ ಬಾ
ಬಿಗಿಯುತ ಬಾ — ಸಿಗಿಯುತ ಬಾ
ಹಾ, ಹಾ, ಹಾ — ಹೋ, ಹೋ, ಹೋ
ಅಹ್ಹ ಹಹ್ಹ ಹ್ಹಾ — ಉಹ್ಹು ಹುಹ್ಹು ಹ್ಹೂ
ಬಾಬಾರೊ ಬೇಗಾ, ತಡವೇಕೋ ಓ ಎನ್ನೊಡೆಯಾ
ಕಲಹ ಭೀಕ್ಷೆಯನೂ, ಬೇಡುವೆ ನಾಸಿದೋ, ಸೆರೆಗೋಡ್ಡೀ॥
ಅಬಲೆಯವಾಂ — ಛೆಯ ಸಲ್ಲಿಸು ಬಾ
ಎನ್ನ ಮನೋರಥ — ಆರಿಸುಬಾ
ಲಲನೆಯು ಮೊರೆಯಿದೂ, ಕೇಳಿಸದೇನೋ ಮನಮಾಡೋ
ನಾ ನಾರೀ೯೯ — ನೀ ಶೌರೀ೯೯
ರೀ, ರೀ, ರೀ, — ಜಗಳಾಡುವ, ರೀ॥

["ಬಾ ಪ್ರಿಯನೇ" ಎಂಬಕಡೆ ಶಾಂತಪತಿಯು ನೀಲೀ ಬೆಳಕಿನಲ್ಲಿ ಪ್ರತ್ಯಕ್ಷ ನಾಗಿ, ಅಲ್ಲಿಂದ ಮುಂದಕ್ಕೆ ಲಕ್ಷಮ್ಮನು ಹಾಡನ್ನು ಅವನಿಗೆ ಸಂಬೋಧಿಸಿ, ಹಾಡಿನ ಕೊನೆಯಲ್ಲಿ ಶಾಂತಪತಿಯು ಅದೃಶ್ಯನಾಗುವಂತೆ ತೋರಿಸಬಹುದು]

[ನಿಡುಸುಯ್ದು,] .....ಭ್ರಾಂತಿ,....ಬರೀ ಭ್ರಾಂತಿ !........ನಿಜವಾಗೂ ಅಷ್ಟು ಸುಖ ಬರೆದಿದೆಯೇ ನನ್ನ ಹಣೇಲಿ? ಎಲ್ಲಿ ಬಂತು, ಎಲ್ಲಿ

ಬಂತು?! ಅಲ್ಲ, ಅಲ್ಲ, ನಾನಷ್ಟು ಪುಣ್ಯಶಾಲಿನಿಯಲ್ಲ!....ಆದರೂ, ಓ ದೇವರೇ, ಈ ನನ್ನ ಮೊರೆ ಅನ್ನೋದು ಆ ನಿನ್ನ ಕಿವಿಗೆ ಮುಟ್ಟಿ, ಆ ನಿನ್ನ ಕರುಣಾಕಟಾಕ್ಷ ಅನ್ನೋದು ಈ ನನ್ನ ಮೇಲೆ ಬಿದ್ದರೆ, ಯ್ಯಾವುದಕ್ಕೆ ತಾನೆ ಏನು ಕಡಮೆ?.........ಆದ್ರಿಂದ, ಬರ್ತೀನಿ, ಹಚ್ಚಿ ಬರ್ತೀನಿ, ಒಳಕ್ಹೋಗಿ ನಿನಗೊಂದು ದೀವಿಗೇನಾದ್ರೂ ಹಚ್ಚಿಬರ್ತೀನಿ!

[ನಿರ್ಗಮ (ಇ): ಲಕ್ಷಮ್ಮತ್ತಿಗೆ]

[ಪ್ರವೇಶ (ಅ); ಶಾಂತಪತಿ.]

[ಶಾಂತಪತಿಯು ಕುಂಬಳಕಾಯಿ, ಬಾರ್ ಸೋಪು, ಸಮೇತ ಪ್ರವೇಶಿಸಿ, ಈ ಕೆಳಗಿನ ಹಾಡನ್ನು ಹಾಡುತ್ತ, (ರ) ಎಂಬಲ್ಲಿಗೆ ಬಂದು ನಿಲ್ಲುವನು.]

(ಹಾಡು)

[ಮೇಲಿನಂತೆ]

ಶಾಂತಪತಿ

ಶಾಂತಿಯು ಬಯ — ಸುವುದೆನ್ನ ಮನಾ
ಶಾಂತಿಯು ಹೊರತೂ — ಸುಖವಿಲ್ಲಾ
ಶಾಂತಿಯು ಬಯಸುವುದೆನ್ನ ಮನಾ ||
ಎಂದಿಗೆ ಕಾಂಬೆನೋ — ಶಾಂತಿಯ ಸುಖವನೂ
ಶಾಂತಿಯೆ ಎನ್ನಯ — ಸರ್ವಸ್ವಾ ||
ಸಾಧಿಸುವೇ — ಶಾಂತಿಯನೂ
ಕೈಬಿಡುವೇ — ಕೋಪವನೂ ||

[ತನ್ನಲ್ಲಿ:] ಸದ್ಗುರುವೇ, ಶಾಂತಾನಂದಾ!........[ಎನ್ನುತ್ತ ಕುಂಬಳಕಾಯಿ, ಬಾರ್ ಸೋಪು, ಮೇಜಿನಮೇಲಿಟ್ಟು,]....ಲಕ್ಷ್ಮಾ, ....ಲಕ್ಷ್ಮಾ.... ಇದ್ದೀಯಾ ಒಳಗೇ?

[ಪ್ರವೇಶ (ಇ): ಲಕ್ಷಮ್ಮ.]

**ಲಕ್ಷಮ್ಮತ್ತಿಗೆ:** [ಸೆರಗು ಸರಿಪಡಿಸಿಕೊಳ್ಳುತ್ತ ಸರ್ರನೆ (ವ) ಎಂಬಲ್ಲಿಗೆ ಬಂದು, ಸಿಡುಕಿನಿಂದ]....ಅಲ್ಲಾಂದ್ರೇ, ಇಲ್ಲಿರೋ ಪೇಟೆಗ್ಹೋಗಿ ಬರೋದಕ್ಕೆ ಇಷ್ಟೊತ್ತಾಗಬೇಕೇ?

**ಶಾಂತಪತಿ:** [ನಿಧಾನವಾಗಿ]....ಆಗ್ಲೇ ಬರ್ತಾ ಇದ್ದೇ!........ಆದ್ರೆ, ದಾರೀಲೀ, ಆ ಮೆಣಸಿನಕಾಯಂಗಡಿ ಉಗ್ರಪ್ಪನ ಕಿರೇ ಮಗ, ಆ

ವೀರಭದ್ರಯ್ಯನ ಮನೇಲಿ ಅಸಾಧ್ಯ ಜಗಳ—ಗಂಡನಿಗೂ, ಹೆಂಡ್ತಿ ರುದ್ರಮ್ಮನಿಗೂ!....ತುಂಬಾ ಜನ ಕಲೆತಿದ್ರು—ಈಚೆಗೆ ಬರೋಣಾಂದ್ರೆ ದಾರೀನೇ ಇಲ್ಲ!........ಕಡೆಗೂ ಬೆತ್ತಾತಕೊಂಡ್ಹೊಡದೇಬಿಟ್ಟ ಮಹಾ ರಾಯ ಆಕೀನ!....ಹೀಗಾದ್ರೆ ಹ್ಯಾಗೆ ಸಂಸಾರಗ್ಳು?!

ಲಕ್ಷಮ್ಮತ್ತಿಗೆ: [ತನ್ನಲ್ಲಿ] ಪುಣ್ಯಾತ್ಮರ ಸಂಸಾರಗ್ಳು!

ಶಾಂತಪತಿ: ಅಂದ್ಹಾಗೆ, ಇವರಿಬ್ರೂ ಸರಿಹೋಗಿಬಿಟ್ಟಿದಾರಲ್ಲ ಆಗ್ಲೇ! ಪೇಟೇಲಿ ಸಿಕ್ಕಿದ್ರು!....ನಾನಾಗ್ಲೇ ಹೇಳ್ಳಿಲ್ವೇ, ಈ ಜಗಳಗಳ ಮಧ್ಯೇ ಹೋಗಬಾರದೂಂತಾ?....ಹೋಗ್಴ೀ, ಇನ್ನು ಸಾಕು ಜಗಳದ ಸುದ್ದಿ, ಇಗೊ, ಈ ಬಾರ್ ಸೋಪೂ ಕುಂಬಳಕಾಯೀ ಒಳಗಿಟ್ಕೋ.

ಲಕ್ಷಮ್ಮತ್ತಿಗೆ: [ಸಿಡುಕಿನಿಂದ] ಬೇಕಾದ್ರೆ ನೀವೇ ಹೋಗಿ ಒಳಗಿಟ್ ಬನ್ನಿ—ಇಲ್ಲಿ ಯಾರೂ ಇಲ್ಲ ನಿಮ್ ಪರಿಚಾರಕ್ರು!

ಶಾಂತಪತಿ: [ಬೆಚ್ಚಿ, ದಿಗ್ಭ್ರಾಂತನಾಗಿ]....ಆಂ?!.....[ಎಂದು ಹೆಂಡತಿಯ ಮುಖವನ್ನು ಆಶ್ಚರ್ಯದಿಂದ ನೋಡುವನು.]

ಲಕ್ಷಮ್ಮತ್ತಿಗೆ: ಏನ್ಹಾಗೆ ನೋಡ್ತೀರೀ?—ಬೆತ್ತಾ ತಕೊಂಡ್ಹೊಡ್ಯೋರ್ಹಾಗೇ!

ಶಾಂತಪತಿ: [ಯೋಚನೆಯಿಂದ]..... .........ಇದೇನು ಹೀಗೆ, ಎಂದೂ ಇಲ್ಲದ್ದೂ!?.....ಆಯ್ತು, ನಾನೇ ಇಟ್ಟು ಬರ್ತೀನೇಳು!..........[ಕುಂಬಳಕಾಯಿ, ಬಾರ್‌ಸೋಪು ಸಮೇತ (ಇ) ಬಾಗಿಲನ್ನು ಪ್ರವೇಶಿಸಿ, ಅವುಗಳನ್ನು ಒಳಗಿಟ್ಟು, ಹಿಂದಿರುಗಿ ಬರುತ್ತ,].... ...ಈ ಕಿಟಕೀ ಬಾಗ್ಲು ತೆರೀಬಾರದೇ—ಇಂಗಾಲಾಮ್ಲ ಎಲ್ಲಾ ಹೊರಕ್ಹೋಗೋ ಹಾಗೆ!.....ಎನ್ನುತ್ತ (ಒ) ಕಿಟಕಿಯನ್ನು ತೆರೆದು, ಮತ್ತೆ (ರ) ಎಂಬಲ್ಲಿಗೆ ಬರುವನು.]

ಲಕ್ಷಮ್ಮತ್ತಿಗೆ: [(ಟ) ಬಳಿ ನಿಂತು,].........ಪೇಟೇಗ್ಹೋಗಿದ್ದೋರು ಹಾಗೇ ಒಂದೊಳ್ಳೇ ಬೆನಾರೆಸ್ ಸೀರೇನಾದ್ರೂ ತರಬಾರದಾಗಿತ್ತೇ?

ಶಾಂತಿಪತಿ: ನೋಡು, ಬೆನಾರೆಸ್ ಸೀರೇ ಬೇಡಾ, ಧರ್ಮಾವರದ್ದೇ ತಕೋ, ಅಂತ ಎಷ್ಟು ಸಾರ್ತಿ ಹೇಳಿದರೂ, ತಿರಿಗೀ ಅದೇ ಮಾತಾಡ್ತೀಯಲ್ಲಾ!

ಲಕ್ಷಮ್ಮತ್ತಿಗೆ: ನನಗೆ ಧರ್ಮಾವರದ್ದು ಬೇಡ, ಬೆನಾರೆಸ್‌ದೇ ಆಗಬೇಕು!

ಶಾಂತಪತಿ: [ಯೋಚಿಸಿ,] ಆಯ್ತೇಳು, ಹಾಗಾದ್ರೆ ಹಾಗೇ ಮಾಡೋಣ!....ಮುಂದಿನ ತಿಂಗ್ಳೇನೋ ಹೊಸ ರಖಂ ಬರುತ್ವಂತೆ ಧಾರಣೇನೂ ಅರ್ಧಕ್ಕರ್ಧ ಇಳಿಯುತ್ತಂತೆ—ಆಗ ತಕೊಳ್ಳೋಣ.

ಲಕ್ಷಮ್ಮತ್ತಿಗೆ: ನಾನು ಮುಂದಿನ ತಿಂಗಳ ತನಕ ತಡೆಯೋದಿಲ್ಲ. ಈಗ್ಲೇ ಆಗಬೇಕು!

ಶಾಂತಪತಿ: [ಸ್ವಲ್ಪ ಯೋಚಿಸಿ, ತನ್ನಲ್ಲಿ] ....ಯಾಕೋ ತುಂಬಾ ಹಠಾ ಹಿಡಿದಿದಾಳಲ್ಲಾ ಈ ಹೊತ್ತು!....[ಹೆಂಡತಿಗೆ:] ಹುಂ, ಆಗ್ಲಿ, ಈಗ್ಲೇ ಹೋಗೀ ತರ್ತೀನಿ...ಅಂದ್ಹಾಗೆ, ಭಾನುವಾರ ಮಧ್ಯಾಹ್ನ!—ಜವಳೀ ಅಂಗಡಿ ಮುಚ್ಚಿರುತ್ವೆ ಇಷ್ಟೊತ್ನಿಂದ! ಎಂಥಾ ಕೆಲಸವಾಯ್ತು! ....ಒಳ್ಳೇದು, ನಾಳೇ ಬೆಳಗ್ಗೆ ಅಷ್ಟೊತ್ತಿಗೇ ಹೋಗಿ ತರ್ತೀನೇಳು; ಇನ್ನೇನ್ಮಾಡೋದಕ್ಕಾಗುತ್ತೆ ಈಗ?....ಈಗ ಬೇಕಾದ್ರೆ ದುಡ್ಡು ಕೊಟ್ಟೆ ರ್ತೀನಿ, ನಿನ್ಹತ್ತಿರಲೇ ಇಟ್ಕೊಂಡಿರು ನಾಳೇತನಕ.

ಲಕ್ಷಮ್ಮತ್ತಿಗೆ: [ತನ್ನಲ್ಲಿ]....ಒಪ್ಕೊಂಡೇ ಬಿಟ್ರಲ್ಲಾ!....ಹೀಗೆ, ಜಗಳ ಆಡದೇನೇ, ಸೀರೇ ತಂದ್ರೆ ಯಾರಿಗೆ ಬೇಕು?....[ಸ್ವಲ್ಪ ಯೋಚಿಸಿ ಗಂಡನಿಗೆ:] ನನ್ಹತ್ರ ಸೀರೆ ಬೇಕಾದಷ್ಟಿವೆ; ಆದ್ರೂ ಒಂದು ಜಾಸ್ತಿ ಇರಲಿ ಅಂತೀನಿ....ಏನೂ ಬೇಡಾಂತೀರಾ?

ಶಾಂತಪತಿ: ಯಾರು ಬೇಡಾಂದ್ರು? ಸೀರೆ ಜಾಸ್ತಿ ಇದ್ರೆ ಎಲ್ಹೋಗುತ್ವೆ? ತಪ್ಪೇನದರಲ್ಲೀ?

ಲಕ್ಷಮ್ಮತ್ತಿಗೆ: [ತನ್ನಲ್ಲಿ] ಸರಿಯೋಯ್ತು!.....[ಗಂಡನಿಗೆ]........ ನಾ ಹೇಳೋಂಥಾ ಮೇಲು ಸೀರೆ ನೀವೆಲ್ಲಿ ತರ್ತೀರಿ, ತರೋದಿಲ್ಲ!

ಶಾಂತಪತಿ: ಹಾಗಾದ್ರೆ, ನಾಳೆ ಬೆಳಗ್ಗೆ ಇಬ್ರೂ ಒಟ್ಟಿಗೇ ಹೋಗೋಣ ಅಂಗಡೀಗೆ. ಅಲ್ಲಿ ಹತ್ತಾರು ರಖಂ ಇರುತ್ವಲ್ಲ; ಅವೆಲ್ಲಾ ತೆಗಿಸಿ ನೋಡಿ, ನಿನಗೆ ಯಾವ ಸೀರೆ ಒಪ್ಪಿಗೆ ಆಗುತ್ತೋ ಅದನ್ನೇ ತಕೊಂಡ್ಬರೋಣಾ!—ನಾಲಕ್ಕಾಸು ಹೆಚ್ಚೋ ಕಡಿಮೆ!....ಯಾಕೇಂದ್ರೆ ಉಟ್ಕೊಳ್ಳೋರಿಗೆ ಒಪ್ಪಿಗೆ ಆಗಬೇಕಾದ್ದು ಮುಖ್ಯ!— ಹೌದೋ ಅಲ್ವೋ?

ಲಕ್ಷಮ್ಮತ್ತಿಗೆ : [ತನ್ನಲ್ಲಿ] ಅಸಲಿಗೇ ಮೋಸವಾಯ್ತಲ್ಲಾ !

ಶಾಂತಪತಿ : [(ಕ) ಕುರ್ಚಿಯಲ್ಲಿ ಕುಳಿತು, ಎಕ್ಸರ್‌ಸೈಸ್ ಪುಸ್ತಕದಲ್ಲಿ ಬರೆಯತೊಡಗಿ, ತನ್ನಲ್ಲಿ :]....ಮೊದಲು ಒಂದು ಶ್ರೀಕಾರ ಹಾಕಿಬಿಡೋಣ ......[ಎಂದು ಶ್ರೀಕಾರ ಹಾಕಿ, ಗಟ್ಟಿಯಾಗಿ, ಸ್ಪಷ್ಟವಾಗಿ, ಹೇಳಿಕೊಂಡು ಬರೆಯು ವನು :]....ಓಂ ಶಾಂತಿಃ ಶಾಂತಿಃ ಶಾಂತಿಃ !....ಓಂ ಶಾಂತಿಃ ಶಾಂತಿಃ ಶಾಂತಿಃ ! ಓಂ....

ಲಕ್ಷ್ಮಮ್ಮತ್ತಿಗೆ : [ಈಚೆ ಬಂದು, ತನ್ನಲ್ಲಿ]....ಓಹೋ, ಶಾಂತಿಕೋಟೀ ಪ್ರಾರಂಭಾನೇನೋ ! ಒಳ್ಳೇ ಸಮಯಾನೇ ಸಿಕ್ಕಿದ್ದಾಗಾಯ್ತು ! ಈಗ ಚೆನ್ನಾಗಿ ರೇಗಿಸಿಬಿಡಬಹುದು !.....[ಗಂಡನ ಬಳಿಗೆ ಹೋಗಿ, ಸಿಡುಕಿನಿಂದ] ....ಅದೆಲ್ಲಾ, ನಾ ಮನೇಲಿಲ್ದೇ ಇದ್ದಾಗ ಬೇಕಾದ್ರೆ ಬರಕೊಳ್ಳಿ.

ಶಾಂತಪತಿ: [ಕ್ಷಣಕಾಲ ಮೌನವಾಗಿದ್ದು, ಆ ಮೇಲೆ ಶಾಂತತೆಯಿಂದ :].... ಅಲ್ಲಾ, ನಾ ಬರಕೊಂಡ್ರೆ ನಿನಗೇನೀಗಾ?....ಹೋಗ್ಲಿ, ಈಗ ನಿನಗ್ಯಾಕೋ ಬೇಕಿಲ್ಲ, ಆ ಮೇಲೆ ಬರೆಯೋಣ....ಆದ್ರೆ, ಯಾಕೆ ಹೀಗೇ ?........ [ಎಂದು ಯೋಚಿಸುತ್ತ ಏಳುವನು.]

ಲಕ್ಷಮ್ಮತ್ತಿಗೆ: [ಸತ್ರನೆ (ಲ) ಎಂಬಲ್ಲಿಗೆ ಬಂದು, ತನ್ನಲ್ಲಿ:]....ಹೊಡೀ ತಾರೋ ಏನೋ ಈಗ !....ಒಂದ್ಕಡೆ ಭಯವಾಗುತ್ತೆ, ಒಂದ್ಕಡೆ ಬೇಕು ಅನ್ಸುತ್ತೆ !

ಶಾಂತಪತಿ : [ಯೋಚಿಸುತ್ತ (ರ) ಎಂಬಲ್ಲಿಗೆ ಬಂದು, ತನ್ನಲ್ಲಿ :]......... ಬರೆಯೋದನ್ನೇ ನಿಲ್ಲಿಸಿಬಿಟ್ಳಲ್ಲಾ !....ಕೋಪ ಬರ್ತಾ ಇದೆ ನನಗೆ ! ಆದ್ರೆ ಅದಕ್ಕೆ ದಾರೀ ಕೊಡಬಾರದು ! ....ಎಂದೂ ಇಲ್ಲದ್ದು ಈ ಹೊತ್ತು ಇವಳು ಹೀಗೆ ಗುರ್ ಅನ್ನೋದಕ್ಕೆ ಕಾರಣವಾದ್ರೂ ಏನಿದ್ದೀತೂ ?!.... ನಿಷ್ಕಾರಣ !....ಹಾಗಾದ್ರೆ, ನನ್ನ ಪರೀಕ್ಷೇ ಮಾಡಬೇಕೂಂತೆ ದೇವರೇ ಇವಳಿಗೀ ಬುದ್ಧೀ ಕೊಟ್ಟಿದಾನೋ ಏನೋ !....ಒಳ್ಳೇದು !....[ಕಿರುನಗೆ ಯಿಂದ ಲಕ್ಷ್ಮಮ್ಮನಿಗೆ :] ಹೋಗ್ಲೀ ಬಿಡು ಲಕ್ಷ್ಮೀ, ಅದನ್ನು ನಿಧಾನ್ವಾಗಿ ಬರೆಯೋಣ; ಅವಸರಾ ತಾನೇ ಏನೀಗ ?....ಹೋಗಿ, ಒಂದು ಲೋಟಾ ದಲ್ಲಿ ಮಜ್ಜಿಗೇನಾದ್ರೂ ತಕೊಂಡ್ಬಾ ಕುಡ್ಯೋದಕ್ಕೆ !

ಲಕ್ಷಮ್ಮತ್ತಿಗೆ : [ಮೇಲಿನ ಹಲ್ಲಿನಿಂದ ತುಟಿ ಕಚ್ಚಿಕೊಂಡು, ಗಂಡನ

ಮುಖವನ್ನು ತೀಕ್ಷ್ಣವಾಗಿ ನೋಡಿ, ಸಮೀಪಿಸಿ,]....ಅಲ್ಲಾಂದ್ರೇ, ಶಾಂತಿ ಕೋಟೇ ಬರೀಬೇಡೀಂದ್ರೆ ಮಜ್ಜಿಗೇ ಕೇಳ್ತೀರಲ್ಲಾ, .....ನನ್ಮೇಲೆ ಸಿಟ್ ಬರೋದಿಲ್ವೆ ನಿಮಗೆ—ಹೀಗ್ಮಾಡಿದಳಲ್ಲಾಂತಾ ? !

ಶಾಂತಪತಿ: ಸಿಟ್ಟು ಬರೋಂಥಾ ಪ್ರಮಾದವಾದರೂ ಏನಾಗಿರೋದೀಗಾ ?

ಲಕ್ಷಮ್ಮತ್ತಿಗೆ: ಹಾಗಾದ್ರೆ ಮಜ್ಜಿಗೆ ಕೊಡೋದಿಲ್ಲ.

ಶಾಂತಪತಿ: ಏನು ? !

ಲಕ್ಷ್ಮಮ್ಮತ್ತಿಗೆ: [ದೃಢವಾಗಿ] ಕೊಡೋದಿಲ್ಲಾಂದೆ.

ಶಾಂತಪತಿ: ಹಾಗಾದ್ಮೇಲೇ....

ಲಕ್ಷಮ್ಮತ್ತಿಗೆ: ಅದೇನ್ಮಾಡ್ತೀರೋ ಮಾಡಿ.

ಶಾಂತಪತಿ: ನಾನೇ ಒಳಕ್ಹೋಗಿ ಕುಡಿದು ಬರ್ತೀನೀ:.......... [ಒಳಕ್ಕೆ ಹೊರಡುವನು.]

ಲಕ್ಷಮ್ಮತ್ತಿಗೆ: [ತನ್ನಲ್ಲಿ:] ಇನ್ನಿವರು ಮಜ್ಜಿಗೇ ಬೇರೇ ಕುಡಿದು ಬಿಟ್ರೆ, ಸಿಟ್ಟು ಬರೋದೇ ಇಲ್ಲ ಇವ್ರಿಗೆ!..........[ಗಂಡನಿಗೆ:] ಮಜ್ಜಿಗೆ ಏನೂ ಕುಡೀಬೇಡಿ—ರಾತ್ರೀ ಊಟಕ್ಕೆ ಸಾಲ್ದೇ ಬರುತ್ತೆ.

ಶಾಂತಪತಿ: ಓಹೋ, ರಾತ್ರೀ ಊಟಕ್ಕೆ ಸರಿಯಾಗಿದ್ಯೋ ?...... ಹೋಗ್ಲೀ ಬಿಡು, ಬೇಡವೇ ಬೇಡ!........[ಎನ್ನುತ್ತ ಮತ್ತೆ (ರ) ಎಂಬಲ್ಲಿಗೆ ಬರುವನು.]

ಲಕ್ಷಮ್ಮತ್ತಿಗೆ: [ತನ್ನಲ್ಲಿ] ನಾನೀಗೇನ್ಮಾಡ್ಬೇಕೋ ದೇವರೇ ಬಲ್ಲ! ..........ಅದೇನ್ ನನಗೆ ಜಗಳ ಆಡೋದಕ್ಕೇ ಬರೋದಿಲ್ವೋ, ಅಥ್ವಾ ಅವರಿಗೆ ಸಿಟ್ಮಾಡ್ಕೊಳ್ಳೋವಕ್ಕೇ ಬರೋದಿಲ್ವೋ!..........[ಗಂಡನಿಗೆ:] ಮತ್ತೀಗ ನಿಮಗೆ ಬಾಯಾರಿಕೆ ಆಗಿದ್ಯಲ್ಲಾ, ಹ್ಯಾಗ್ಮಾಡ್ತೀರೀ ?

ಶಾಂತಪತಿ: ಮಜ್ಜಿಗೆ ಅಲ್ದಿದ್ರೆ ಪಾನಕಾ ಆಯ್ತು..........ಅಥ್ವಾ ನ್ನೀರೇ ಆಯ್ತು!

ಲಕ್ಷಮ್ಮತ್ತಿಗೆ: [ಯೋಚಿಸಿ].....ತಾಳಿ ಹಾಗಾದ್ರೆ :..........ಪಾನಕಾ ಮಾಡಿಟ್ಟದೀನೀ, ತಂದ್ಕೊಡ್ತೀನಿ.....[(ಇ) ಬಾಗಿಲನ್ನು ಪ್ರವೇಶಿಸಿ, ಗಾಜಿನ ಲೋಟದಲ್ಲಿ ನೀರು ತಂದುಕೊಡುವಳು.]

ಶಾಂತಪತಿ : [(ಕ) ಕುರ್ಚಿಯಲ್ಲಿ ಕುಳಿತು, ನೀರು ಕುಡಿದು, ಲೋಟ ವನ್ನು ಮೇಜಿನಮೇಲಿಟ್ಟು,] .....ಅ್ಹ ! .... ದಾಹ ತೀರಿತು !

ಲಕ್ಷಮ್ಮತ್ತಿಗೆ : [ಕುತೂಹಲದಿಂದ] ಚನ್ನಾಗಿತ್ತೇನಂದ್ರೆ ಪ್ಪಾನ್ಕಾ ?

ಶಾಂತಪತಿ : ಆಹಾ ! ಸ್ವೊರ್ಗಸ್ನಾಗಿತ್ತು !

ಲಕ್ಷಮ್ಮತ್ತಿಗೆ : ನಾನದಕ್ಕೆ ನಿಂಬೇಹುಳೀನೇ ಹಿಂಡಿರಲಿಲ್ವ ಲ್ಲಾಂದ್ರೇ !

ಶಾಂತಪತಿ : ಆದರೆ ತಾನೇ ಏನು ?

ಲಕ್ಷಮ್ಮತ್ತಿಗೆ : ಅಯ್ಯೋ ಸಕ್ರೇನೂ ಹಾಕಿರಲಿಲ್ವಲ್ಲಾಂದ್ರೇ !

ಶಾಂತಪತಿ ; ಮರೆತುಬಿಟ್ಯೇನೋ !

ಲಕ್ಷಮ್ಮತ್ತಿಗೆ : ಇಲ್ಲ, ಮರೀಲಿಲ್ಲ, ಉದ್ದೇಶ ಪೂರ್ವಕವಾಗೇ ಹಾಕ್ಲಿಲ್ಲ. ನಿಮಗೆ ಸಿಟ್ ಬಂದ್ರೆ ಬರ್ಲಿ, ಅದೇನ್ಮಾಡ್ತೀರೋ ಮಾಡಿ.

ಶಾಂತಪತಿ : ಉದ್ದೇಶಪೂರ್ವಕವಾಗೇ ಹಾಕ್ಲಿಲ್ಲಾಂತ ನೀ ಹೇಳಿ ದರೆ ತಾನೇ ನಾ ನಂಬ್ತೀನ್ಯೇ ಹೇಳು !.... ನನಗ್ಗೊತ್ತು, ನೀನಂಥೋಳ ಲ್ಲಾಂತ್ರಾ !

ಲಕ್ಷಮ್ಮತ್ತಿಗೆ : [ಬೇಸರದಿಂದ, ತನ್ನಲ್ಲಿ :].... ದೇವರೇ ಗತಿ !........ [ಗಂಡನಿಗೆ :] ಅಲ್ಲಾ, ರಾತ್ರೀಗೇನಡಿಗೇ ಮಾಡ್ಬೇಕೂಂದ್ರೇ ?

ಶಾಂಪತಿ : ನಿನ್ನ ಖುಷೀ ಹ್ಯಾಗಿದ್ರೆ ಹಾಗೆ !

ಲಕ್ಷಮ್ಮತ್ತಿಗೆ : ನನ್ನ ಖುಷೀ ಹ್ಯಾಗಿದೇಂತೀರೋ ?—ನಾನಡಿಗೆ ಮಾಡೋದಿಲ್ಲ, ನೀವೇ ಮಾಡ್ಕೊಳ್ಳಿ.

ಶಾಂತಪತಿ :.... ಯಾಕೆ ?.... ಕೈಲಾಗೋದಿಲ್ವೆ ?.... ಬೇಸರ ಆಗಿದ್ಯೇ?

ಲಕ್ಷಮ್ಮತ್ತಿಗೆ : ಕೈಲಾಗುತ್ತೆ !.... ಬೇಸ್ರಾನೂ ಇಲ್ಲ!........ ಆದ್ರೂ ನಾನದೇಬೇಕಾಗಿ ಮಾಡೋದಿಲ್ಲಾಂತೀನಿ !

ಶಾಂತಪತಿ : ಆಯ್ತು, ನನಗ್ಯಾವ್ಯಾಗಿದ್ರೂ ಬರುತ್ತಲ್ಲ—ಅನ್ನ, ಹುಳಿ, ಮಾಡೋದು !

ಲಕ್ಷಮ್ಮತ್ತಿಗೆ : [ಯೋಚಿಸಿ,].... ಹಾಗಾದ್ರೇ,.... ಆ ಕುಂಬಳಕಾಯಿ ಹೆಚ್ಚಿಡಿ.

ಶಾಂತಪತಿ : ಕುಂಬಳಕಾಯಿ ಹೆಚ್ಚೋದೆಷ್ಟೊತ್ತು ಮಹಾ ! ಸಾಯಂಕಾಲ ಆಡಿಗ್ಗಿಟ್ಟಾಗ ಹಾಗೇ ಹೆಚ್ಕೊಂಡ್ರಾಗುತ್ತೆ !

ಲಕ್ಷಮ್ಮತ್ತಿಗೆ : [ಗದರಿಸುವಂತೆ] ಈಗ ನೀವು ಮಾಡೋ ಒಗತ್ನ ಏನೂ ?......ಈಗ್ಲೇ ಹೆಚ್ಚಿಡಿ.

ಶಾಂತಪತಿ : ಉ್ಹುಂ, ಹಾಗೂ ಆಗ್ಲಿ .....ಆ ಈಳಿಗೇಮಣೇ—ನಾನೇ ತಂದ್ಕೋತೇನೇಳು !

ಲಕ್ಷಮ್ಮತ್ತಿಗೆ : ತಂದ್ಕೊಳ್ಳಿ, ಏನೀಗ ?....ನಾನೀ ಆರಾಮುಕುರ್ಚೀ ಮೇಲೆ ಕೂತಿರ್ತೀನಿ, ಹಾಯಾಗಿ, ಕಾಲ್ಮೇಲೆ ಕಾಲ್ಹಾಕ್ಕೊಂಡು !

ಶಾಂತಪತಿ : [ಹೆಗಲ ಮೇಲಿರುವ ಟವಲಿನಿಂದ ಆರಾಮುಕುರ್ಚಿಯನ್ನು ಧೂಳು ಹೊಡೆದು, ಸರಿಪಡಿಸಿ,] .....ಕೂತ್ಕೋ ಬಾ !....ವಿಶ್ರಮಿಸ್ಕೋ..... ನಾನೆಲ್ಲಾ ತಂದ್ಕೋತೀನಿ ಈಳಿಗೇಮಣೆ !....[ಎನ್ನುತ್ತ (ಇ) ಬಾಗಿಲನ್ನು ಪ್ರವೇಶಿಸುವನು.]

ಲಕ್ಷಮ್ಮತ್ತಿಗೆ : [ತನ್ನಲ್ಲಿ :] ಹಣೇ ಬರಹ !....ಅದಿನ್ನೆಂಥಾ ಸ್ವಭಾವ ಇವರದು ?! ಕಿಬ್ಬಿಬ್ಬೀಂದ್ರೂ ಜಗಳಕ್ಕೆ ಬರವೊಲ್ರಲ್ಲಾ !....ಈ ತಲ ಬಾಗ್ಲು ಅಗಳೀನಾದ್ರೂ ಹಾಕೋಣ, ಥಟಕ್ಕನೆ ಯಾರೂದ್ರೂ ಬಂದ್ ಬಿಟ್ಟಾರು !....[ಎನ್ನುತ್ತ (ಅ) ಬಾಗಿಲು ಅಗಳಿ ಹಾಕಿ ಬಂದು, ಆರಾಮು ಕುರ್ಚಿಯಲ್ಲಿ ಕಾಲುಮೇಲೆ ಕಾಲು ಹಾಕಿಕೊಂಡು ಕುಳಿತುಕೊಳ್ಳುವಳು]

ಶಾಂತಪತಿ : [ಒಂದು ಕೈಯಲ್ಲಿ ದೊಡ್ಡ ಈಳಿಗೇ ಮಣೆ, ಇನ್ನೊಂದು ಕೈಯಲ್ಲಿ ಕುಂಬಳಕಾಯಿ, ತಂದು, ಈಳಿಗೇಮಣೆಯನ್ನು (ವ) ಎಂಬಲ್ಲಿಟ್ಟು, (ಪ) ಬಳಿ ನಿಂತು ಕುಂಬಳಕಾಯಿ ಎತ್ತಿ ನೆಲಕ್ಕೆ ಕುಕ್ಕಿ ಒಡೆದು, ಅದರ ಹೋಳುಗಳನ್ನು ಈಳಿಗೇಮಣೆಯ ಬಳಿ ತಂದಿಟ್ಟುಕೊಂಡು, ಪ್ರೇಕ್ಷಕರಿಗೆ ಅಭಿಮುಖವಾಗಿ ಈಳಿಗೆ ಮಣೆಯ ಮೇಲೆ ಕುಳಿತು,]....ಅಯ್ಯೋ, ಇದೇನು, ಬೀಸಣಿಗೇನಾದ್ರೂ ತರ್ಕೋ....[ಎನ್ನುತ್ತ ಹೆಂಡತಿಗೆ ಬೀಸಣಿಗೆ ಅಂದಿಕೊಟ್ಟು, ಒಂದು ಸಲ ಮೀಸೆ ತಿದ್ದಿಕೊಂಡು, ಕುಂಬಳಕಾಯನ್ನು ದಪ್ಪ ದಪ್ಪ ಹೋಳುಗಳಾಗಿ ಹಚ್ಚತೊಡಗು ವನು.]

ಲಕ್ಷಮ್ಮತ್ತಿಗೆ : [ಹಗುರವಾಗಿ ಸೋವಿಕೊಳ್ಳುತ್ತ]....ನಲ್ಲೀಲಿ ನೀರು ಯಾಕಂದ್ರೆ ಥಣ್‌ಗಿರೋದು ?

ಶಾಂತಪತಿ : [ತನ್ನ ಕೆಲಸದಲ್ಲಿ ನಿರತನಾಗಿ]....ಕೆರೇ ನೀರು ಬಿಡ್ತಾರೆ ....ಆದ್ರೆ ಲರ್ಡ್ಜ ಪಟ್ಟಣದಲ್ಲಿ ಬಿಸಿನೀರಿನ ನಲ್ಲೀನೂ ಇವೆಯಂತೆ !

**ಲಕ್ಷಮ್ಮತ್ತಿಗೆ:** ಒಹೊಹೊ!.... ಹೆಚ್ಚೋದು ಕುಂಬಳಕಾಯಿ!— ಹೇಳೋದು ಲರ್ಡ್ದ ಸುದ್ದಿ!

**ಶಾಂತಪತಿ:** ಯಾಕಾಗಬಾರದು?

**ಲಕ್ಷಮ್ಮತ್ತಿಗೆ:** ಆಗ್ಲೀ,.... ಅಕಾಶ ಯಾಕಂದ್ರೆ ಹಚ್ಚಗಿಲ್ಲ?

**ಶಾಂತಪತಿ:** ಯಾವುದಾದ್ರೂ ಒಂದು ಬಣ್ಣಾಕ್ಕಿರಬೇಕಲ್ಲ! ಅದನ್ನ ಮಾಡೋವಾಗ ದೇವರ್ಹತ್ರ ನೀಲೀ ಬಣ್ಣ ಜಾಸ್ತಿ ಇತ್ತ್ತೋ ಏನೋ!— ಅದ್ದಿಕೊಂಡು ಬಳಿದುಬಿಟ್ಟಿದಾನೆ!.... ಹಾಗಂತ ಇಟ್ಕೋ ಸಾಕು.... ಆದ್ರೆ ಈಗಿನ ಕಾಲದ ಸೈಂಸಿನ್ನೋರು, ಬೇರೇ ಕಾರಣ ಹೇಳ್ತಾರೆ; ಅದಿರಲಿ.

**ಲಕ್ಷಮ್ಮತ್ತಿಗೆ:** ಹುಣಿಸೇಕಾಯಿ ಯಾಕಂದ್ರೆ ಡೊಂಕೂ?

**ಶಾಂತಪತಿ:** ಅದರ ರುಚೀ ಹ್ಯಾಗೋ ಆಕಾರಾನೂ ಹಾಗೇ!.... ಆದ್ರೆ ಕೆಲವು ನೆಟ್ಟಗಿರೋದೂ ಉಂಟೂನ್ನು.

**ಲಕ್ಷಮ್ಮತ್ತಿಗೆ:** [ಕೋಪದಿಂದ] ಸ್ಸರೀ ಹಾಗಾದ್ರೆ!.... ಇನ್‌ಸ್ವಲ್ಪ ಚಿಕ್‌ಚಿಕ್‌ದಾಗಿ ಹೆಚ್ಚಿ.... ಅಷ್ಟ್ ದಪ್ ದಪ್ ಹೋಳು ಹ್ಯಾಗ್ಹಿಡ್ಸುತ್ತೆ ಬಾಯಿ?

**ಶಾಂತಪತಿ:** [ಹೆಚ್ಚಿರುವ ಹೋಳೊಂದನ್ನು ಎರಡು ಮಾಡಿ ತೋರಿಸುತ್ತ,] .... ಇಷ್ಟಿದ್ರೆ ಸಾಕೋ ಅಥ್ವಾ ಇನ್ನೂ ಚಿಕ್‌ದಾಗಿ....?

**ಲಕ್ಷಮ್ಮತ್ತಿಗೆ:** ಸಾಕು, ಒಂದೇ ಸಮನಾಗಿ ಹೆಚ್ಚಿ..... [ಎನ್ನುತ್ತ ಎದ್ದು ಬಂದು, (ಲ) ಎಂಬಲ್ಲಿ ನಿಂತು, ತನ್ನಲ್ಲಿ:] ಇನ್ನೇನ್ಮಾನೇ ಮಾಡೋದು ಸಾಧ್ಯ?.... ನೋಡೋಣ, ಕೊನೇ ಪ್ರಯತ್ನ!..... [ಗಂಡನಿಗೆ:] ಅದಲ್ಲಿರಲೀ, ಎದ್ ಬನ್ನಿ ಇಲ್ಲಿ, ಹೇಳ್ತೀನಿ.

**ಶಾಂತಪತಿ:** [ಸರ್ರನೆ ಬಂದು, ಹೆಂಡತಿಯ ಬಲಗಡೆ ನಿಂತು,].......... ಏನ್ಹೇಳು.

**ಲಕ್ಷಮ್ಮತ್ತಿಗೆ:** [ತನ್ನಲ್ಲಿ].... ಹ್ಯಾಗ್ಹೇಳ್ಳಿ?.... [ಹೇಳಲಾರದೆ:] ಆ ಸ್ಟ್ಯಾಂಡಿನ ಮೇಲಿದ್ಯಲ್ಲಾ,.... ಅದು,.... ನನ್ನ ಹಳೇ...... [ಮಾತು ಕತ್ತಿನಲ್ಲೇ ನಿಲ್ಲುವುದು.]

**ಶಾಂತಪತಿ:** [ತನ್ನಲ್ಲಿ] ಇದು ದೇವರ ಪರೀಕ್ಷೇನೇ ಸರಿ!........ [ಹೆಂಡತಿಗೆ:] ಗೊತ್ತಾಯ್ತು...... ಸ್ಸೀರೇ!?

ಲಕ್ಷಮ್ಮತ್ತಿಗೆ: [ತನ್ನಲ್ಲಿ] ಶಿವ ಶಿವಾ!....[ಗಂಡನಿಗೆ:].....ಊಂ, ಅದೇ!..... ಅದನ್ನು ತಕೊಂಡ್ಹೋಗೀ, .... ಹಿತ್ಲಲ್ಲಿ,.... ನಲ್ಲೀಲಿ ನೀರು ನಿಂತ್ಹೋಗಿದೆ, ಆದ್ರಿಂದ ಸೇದೋಭಾವೀಲಿ ನೀರು ಸೇದಿಕೊಂಡೂ,.... ಹ್ಞಂ.....

ಶಾಂತಪತಿ: ಬಂಡೇ ಮೇಲೆ,.... ಚೊಕ್ಕಟವಾಗಿ,....

ಲಕ್ಷಮ್ಮತ್ತಿಗೆ: ಸಾಕು ಮುಂದಕ್ಹೇಳ್ಬೇಡಿ....[ಎನ್ನುತ್ತ ಕಿವಿಗಳನ್ನು ಮುಚ್ಚಿಕೊಂಡು,].... ಬೇಗ್ಹೋಗಿ.

ಶಾಂತಪತಿ: ಒಂದ್ನಿಮಿಷ್ದಲ್ಲಿ ಒಕ್ಕೊಂಡ್ಬುರ್ತೀನೀ!.... [ಎಂದು ಬನಿಯನ್ ತೋಳುಮಡಿಸಿಕೊಂಡು ಈಳಿಗೇಮಣೆ ವಗೈರೆ ಮೇಜಿನ ಕೆಳಕ್ಕಿಟ್ಟು, ಅಲ್ಲಿ ಇಲ್ಲಿ ಏನನ್ನೋ ಹುಡುಕುವನು.]

ಲಕ್ಷಮ್ಮತ್ತಿಗೆ: ಇನ್ನೂ ಹೋಗ್ಲಿಲ್ವೇ? ಏನು ಹುಡುಕ್ತಾ ಇರೋದೂ?....[ಸ್ವಲ್ಪಯೋಚಿಸಿ,]....ಓ! ಇಗೋ ಇಲ್ಲಿದೆ! [ಎಂದು ಚಿತ್ತವನ್ನು ಕೈಗೆ ತೆಗೆದುಕೊಳ್ಳುವಳು.]

ಶಾಂತಪತಿ: ಅದಲ್ಲಾ!.... ಬಾರ್‌ಸೋಪೂ,—ಎಲ್ಲೋ ಇಟ್ಟೆ.... ಅಂದ್ಹಾಗೆ ಒಳಗಿಟ್ಟಿದೀನಲ್ವೆ?! ....[(ಇ) ಬಾಗಿಲನ್ನು ಪ್ರವೇಶಿಸಿ, ಬಾರ್ ಸೋಪು ತಂದು, (ಪ) ನಿಲುವಿನ ಮೇಲಿರುವ ಸೀರೆಯನ್ನು ಎಡ ಮುಂಗೈ ಮೇಲೆ ಹಾಕಿಕೊಂಡು, ಬಾರ್‌ಸೋಪನ್ನು ಬಲಗೈಯಲ್ಲಿ ಹಿಡಿದು, ಈ ವೇಳೆಗೆ (ಲ) ಎಂಬಲ್ಲಿ ನಿಂತಿರುವ ಹೆಂಡತಿಯ ಬಳಿಗೆ ಬಂದು, ಮೃದುವಾಗಿ:] ಯಾಕೆ, ಹೀಗ್ಮಾಡ್ತೀಯಲ್ಲಾ!.... ಪಕ್ಕದ ಮನೇವ್ರ ಗಾಳಿ ನಿನಗೂ ಏನಾದ್ರೂ ಬೀಸಿತೋ?

ಲಕ್ಷಮ್ಮತ್ತಿಗೆ: ಆಂ ನೋಡಿ, ಅದೇ! ಅದ್ದೇ ಅದ್ನು! ಇಷ್ಟೊತ್ತಿನ ಮೇಲಾದ್ರೂ ಗೊತ್ತಾಯ್ತಲ್ಲ!.... ಸಿಟ್ ಬಂತೇನು, ನಾ ಹೇಳಿದ್ದಕ್ಕೆ? ಹಾಗಾದ್ರೆ ಹೊಡೀರೀಂದ್ರೆ ಈಗ.... [ಎಂದು ಉದ್ವೇಗದಿಂದ ಗಂಡನ ಮುಂದಕ್ಕೆ ಕೆನ್ನೆ ನೀಡಿ, ಕಣ್ಣು ಮುಚ್ಚಿಕೊಂಡು,].... ಈ ಕೆನ್ನೆಗೆ, ಈ ಕೆನ್ನೆಗೆ! ....[ಗಟ್ಟಿಯಾಗಿ] ಅಯ್ಯೋ ಘಟೀರಂತಾ ಹೊಡೀರೀಂದ್ರೆ ಕೆನ್ನೇ ಬಾತ್ಕೊಳ್ಳೋ ಹಾಗೇ!

ಶಾಂತಪತಿ: ಉ ಹು ಹುಂ, ಹಾಗಲ್ಲ! ನೀನೇ ಹೊಡಿ ನನ್ನ ಕೆನ್ನೆಗೆ!

......ಈ ಕೆನ್ನೆಗೆ ಹೊಡೆದರೆ ಆ ಕೆನ್ನೆ ತೋರಿಸ್ತೀನಿ!......ಹೊಡೆದು ನೋಡು ಬೇಕಾದ್ರೆ! ಎಷ್ಟೋ ದಿವಸದಿಂದ ಕಾದಿದೀನಿ ಇಂಥಾ ಸಮಯ ಸಿಕ್ಕೀತೇಂತ!

**ಲಕ್ಷಮ್ಮತ್ತಿಗೆ:** [ತನ್ನಲ್ಲಿ:] ಇನ್ನು ನಾನು ಇವರನ್ನೊಡ್ಯೋದೊಂದೇ ಬಾಕೀ ಇರೋದು!....ಆದ್ರೆ ಆದು ನನ್ನಿಂದ ಸಾಧ್ಯವಿಲ್ಲ.

**ಶಾಂತಪತಿ:** ಹೊಡೀಂತೀಯಲ್ಲಾ! ಎಲ್ಲಾದ್ರೂ ಉಂಟೇ? ಎಂಥಾ ಮಾತು!? ಅನ್ಯಾಯವಾಗಿ ಅಂತೀಯಲ್ಲಾ!.... ಅಲ್ವೇ ಲಕ್ಷ್ಮ್ಮಾ, ಇಷ್ಟ ವರ್ಷ ಆಗಿದೆ; ಒಂದು ದಿನವಾದ್ರೂ......

**ಲಕ್ಷಮ್ಮತ್ತಿಗೆ:** [ತಿರಸ್ಕಾರದಿಂದ] ಸ್ಸರಿ, ಅದೊಂದು ಹೆಮ್ಮೆ ನಿಮಗೆ! ಏನ್‌ಸುಖ ನಿಮ್ಮಂಥೋರನ್ನು ಕಟ್ಟಿಕೊಂಡು? ಹೋಗಿ ಹೋಗಿ, ಅದನ್ಮಾಡ್ಕೊಂಡ್ಬನ್ನಿ......[ತನ್ನಲ್ಲಿ:] ಅದಕ್ಕೇ ಲಾಯಃಖು ನೀವು!

**ಶಾಂತಪತಿ:** [ತನ್ನಲ್ಲಿ] ಪರಮಾತ್ಮಾ, ಅದಿನ್ನೆಷ್ಟು ವಿಧದಲ್ಲಿ ಪರೀಕ್ಷೆ ಮಾಡ್ತೀ ನನ್ನ?!....[(ಉ) ಬಾಗಿಲ ಕಡೆಗೆ ಹೋಗುತ್ತ,]....ಸದ್ಗುರುವೇ, ಶಾಂತಾನಂದಾ!

[ನಿರ್ಗಮ (ಉ) : ಶಾಂತಪತಿ.]

**ಲಕ್ಷಮ್ಮತ್ತಿಗೆ:** [ದೃಷ್ಟಿಯನ್ನು ಸ್ವಲ್ಪ ಮೇಲಕ್ಕೆ ಮಾಡಿ, ಉದ್ವೇಗದಿಂದ:] ಅಯ್ಯೋ ಬ್ರಹ್ಮದೇವರೇ,....ಒಂದು—ಒಂದೇ ಒಂದು—ಏಟಿನ ಸುಖ ನನ್ನ ಹಣೇಲಿ ಬರೆದಿದ್ರೆ, ಅದಿನ್ನೆಷ್ಟ್ ನಷ್ಟಾ ಆಗ್ತಾ ಇತ್ತು ನಿನಗೆ?!......ಈಗ ಆ ಸುಮಕೋಮಲಮ್ಮ ಬಂದ್ರೆ ಏನಂತಾ ಹೇಳ್ಕೊಳ್ಳೋದು, ನಾಚಿಗ್ಗೇಡು!

**ತೆರೆಯಲ್ಲಿ (ಅ) ಬಳಿ : ಸುಮಕೋಮಲ**

[ಗಟ್ಟಿಯಾಗಿ:] ಲಕ್ಷಮ್ಮತ್ಗೇ,...... ಲಕ್ಷಮ್ಮತ್ಗೇ,...... ಬಾಗ್ಲು, ಬಾಗ್ಲೂ....[ಎಂದು ಬಾಗಿಲ ಮೇಲೆ ಶಬ್ದಮಾಡುವಳು.]

**ಲಕ್ಷಮ್ಮತ್ತಿಗೆ:** ಅಗೋ ಬಂದೇ ಬಿಟ್ಲಲ್ಲಾ!....ಬೀಗದ ಕೈ ಕೊಟ್ಟು, ಬೇಗ ಕಳುಹಿಸಿಬಿಡೋದು ಮೇಲು......[ಎನ್ನುತ್ತ (ಅ) ಬಾಗಿಲು ತೆರೆಯುವಳು.]

[ಪ್ರವೇಶ (ಅ) : ಸುಮಕೋಮಲ)

**ಸುಮಕೋಮಲ :** ಏನತ್ತಿಗೇ, ಎಲ್ಲೀವರೆಗೆ ಬಂತೂ?.....ಅಣ್ಣ ಎಲ್ಲಿ?

ಲಕ್ಷಮ್ಮತ್ತಿಗೆ : ಇ-ಇಲ್ಲ.....ಅವರೂ,......ಈಗ ಹಾಲೀ ಇಲ್ಲಿಲ್ಲ.

ಒಳಗೆ (ಉ) ಬಳಿ : **ಶಾಂತಪತಿ**

[ಗಟ್ಟಿಯಾಗಿ :] ಹೂಶ್....ಹೂಶ್....ಹೂಶ್....[ಎನ್ನುತ್ತ ಸೀರೆ ಒಗೆಯುವನು.]

ಲಕ್ಷಮ್ಮತ್ತಿಗೆ : [ಗಾಬರಿಯಿಂದ ಕೈಹಿಸುಕಿಕೊಳ್ಳುತ್ತ, ತನ್ನಲ್ಲಿ :] ಅಯ್ಯೊ, ಇನ್ನೇನ್ಗತಿ! ಇವರು ಒಗ್ಯೋದಕ್ಕೆ ಪ್ರಾರಂಭಾಮಾಡೇಬಿಟ್ರಲ್ಲ!........ [ಸುಮಕೋಮಲೆಗೆ :] ಇಗೋವಮ್ಮಾ, ನಿನ್ನ ಬೀಗದಕ್ಕೈ....[ಎನ್ನುತ್ತ ಬೀಗದಕೈ ಕೊಟ್ಟು,]....ನಿಮ್ಮೆಜಮ್ಮಾನ್ರು ಕಾದಿದಾರೇನೋ ಮನೇ ಹತ್ರಾ?!

ಒಳಗೆ (ಉ) ಬಳಿ : **ಶಾಂತಪತಿ**

[ಹಿಂದಿನಂತೆ] ಹೂಶ್—ಹೆಂಯ್.....ಹೂಶ್—ಹೆಂಯ್....ಹೂಶ್—ಹೆಂಯ್....

**ಸುಮಕೋಮಲ :** ಯಾರೋ ಬಟ್ಟೀ ಒಗೀತಾ ಇರೋ ಹಾಗಿದೆ ಹಿತ್ತಲ್ಲೀ?!

ಲಕ್ಷಮ್ಮತ್ತಿಗೆ : ಪ-ಪ್ಪಂಚೇ ಒಕ್ಕೋತಾ ಇದಾರೆ!......ಅವರೇ...... ಎರಡು ಪಂಚೇನೂ ಒಟ್ಟಿಗೇ ಸೇರಿಸಿ ಒಗೀತಾ ಇದಾರೆ!

**ಸುಮಕೋಮಲ :** ಓ!......ಏನಾದ್ರೂ ತೆಗೆದಿದ್ದೀಯೋ ಇನ್ನೂ ಇಲ್ವೋ?

ಲಕ್ಷಮ್ಮತ್ತಿಗೆ : [ಉದ್ವೇಗದಿಂದ] ಅಯ್ಯೋ, ಅದ ನ್ಯಾಕ್ಕೇ ಳ್ತೀ ಸುಮಕೋಮಲವ್ಮಾ?......ನಾ ಏನಂತಾ ಹೇಳ್ಕೊಳ್ಳಿ ನಿನ್ಮುಂದೆ ಅವರ ಸ್ವಭಾವಾ—ಅಲ್ಲ, ನನ್ ಹಣೇ ಬರಾ?....[ದುಃಖವನ್ನು ನುಂಗಿಕೊಳ್ಳುವಳು]

**ಸುಮಕೋಮಲ :** ರೇಗಿಸಿಬಿಡತ್ತಿಗೇ, ಏನಾದ್ರೂ ಮಾಡೀ!

ಲಕ್ಷಮ್ಮತ್ತಿಗೆ : ಮಾಡಿದ್ದೆಲ್ಲಾ ಆಯ್ತುವಮ್ಮ ಆಗ಼್ೇ!......ಬೆನಾರಸ್ ಸೀರೆ ಈಗ಼್ೇ ಆಗ಼್ೇಕು ಅಂದೆ—ಒಪ್ಕೊಂಡ್ಬಿಟ್ರು!.....ಶಾಂತಿಕೋಟೇ ಬರೀತಾ ಇದ್ದದ್ದನ್ನ ನಿಲ್ಲಿಸ್ದೇ,......ಕುಡ್ಯೋದಕ್ಕೆ ಮಜ್ಜಿಗೇ ಕೊಡೋದಿಲ್ಲಾಂದೇ,......ಪಾನಕಾ ಕೇಳಿದರೆ ನೀರು ಕೊಟ್ಟೇ,......ರಾತ್ರಿಗೆ ಅಡಿಗೆ

ನೀವೇ ಮಾಡೀಂದೇ,.....ಇಗೋ ಈ ಕುಂಬ್ಳಕಾಯಿನೂ ಅವರ ಕೈಲೇ ಹೆಚ್ಚಿಸ್ದೇ,......ಅಲ್ದೇ ನೀ ಹೇಳಿದ್ಹಾಗೆ, "ನಲ್ಲೀಲಿ ನೀರು ಯಾಕೆ ಥಣ್‌ಗಿರೋದು....." ಮುಂತಾಗಿ ಅದೆಲ್ಲಾ ಕೇಳಿದೇ,......

ಸುಮುಕೋಮಲ: ಇಷ್ಟಾದ್ರೂ ಸಿಟ್ ಬರ್ಲಿಲ್ವೇ?!

ಲಕ್ಷಮ್ಮತ್ತಿಗೆ: ಇಲ್ಲಾವಮ್ಮಾ ಬರ್ಲಿಲ್ಲಾ!.....ಶಾಂತಿಕೋಟೇ ಬರೀ ತೀನೀಂತ ಹೊರಟಿರೋರನ್ನ ಏನು ತಾನೇ ಮಾಡೋದು ಸಾಧ್ಯ?!— ಹೇಳು!

ಸುಮುಕೋಮಲ: ಅದಿನ್ನೆಂಥಾ ಶಾಂಥಮೂರ್ತೀನಮ್ಮಾ ಈತಾ!

ಲಕ್ಷಮ್ಮತ್ತಿಗೆ: ನೋಡಮ್ಮ ನೀನೇ ಹಾಗೇ!

[ಪ್ರವೇಶ (ಉ): ಶಾಂತಪತಿ]

[ಶಾಂತಪತಿಯು ನೀರಿನಲ್ಲಿ ಹಿಂಡಿದ ಸೀರೆಯನ್ನು ಕೊಡುವುತ್ತ, ನಿರಿ ಹಿಡಿಯುತ್ತ, ಪ್ರವೇಶಿಸುವನು. ಅದನ್ನು ನೋಡಿ ಲಕ್ಷಮ್ಮನು ಕೈಗಳಿಂದ ಮುಖ ಮುಚ್ಚಿಕೊಂಡು, (ಲ) ಎಂಬಲ್ಲಿ ನಿಲ್ಲುವಳು. ಸುಮುಕೋಮಲೆಯು ನಗು ತಡೆಯುಲಾರದೆ ಬಾಯಿಗೆ ಕರವಸ್ತ್ರ ಮುಚ್ಚಿಕೊಂಡು, ಹೋಗಿ (ಅ) ಬಾಗಿಲಿನ ಬಳಿ ಅರೆ ಮರೆಯಾಗಿ ನಿಲ್ಲುವಳು. ಶಾಂತಪತಿಯು ಇದೊಂದನ್ನೂ ಗಮನಿಸದೆ, ಸೀರೆಯನ್ನು ಜೋಡಿಸಿ ಒಣಗುಹಾಕುವುದಕ್ಕೆ ಸಿದ್ಧಪಡಿಸುವನು. ಲಕ್ಷಮ್ಮನು ಆಗಾಗ ಗಂಡನ ಕಡೆ ಓರೆ ನೋಟ ಬೀರಿ ಮತ್ತೆ ಮುಖ ಮುಚ್ಚಿಕೊಳ್ಳುವಳು. ಶಾಂತಪತಿಯು ಏನನ್ನೋ ಹುಡುಕಲಾರಂಭಿಸುವನು.]

ಲಕ್ಷಮ್ಮತ್ತಿಗೆ: [ಸರಕ್ಕನೆ ಗಂಡನ ಕಡೆ ತಿರುಗಿ,]....ಅಷ್ಟಕ್ಕೇ ಸಾಕ್ಮಾಡೀಂದ್ರೆ ಸಧ್ಯಾ!

ಶಾಂತಪತಿ: [ನಿಧಾನವಾಗಿ:] ತಾಳು....ಇಲ್ಲೆಲ್ಲೋ ಬೆತ್ತಾ ಇತ್ತಲ್ಲಾ!

ಲಕ್ಷಮ್ಮತ್ತಿಗೆ: [ಗೆಲುವಾಗಿ ತನ್ನಲ್ಲಿ].... ಆಂ!..........ಇಷ್ಟೊತ್ತಿಗೆ ತಾವಾಗಿ ಕೇಳಿದರಲ್ಲ ಬೆತ್ತ!....ಬಂತೂ ಸಿಟ್ಟು!! ಎಷ್ಟೇ ಆಗ್ಲೀ ಗಂಡಸ್ರಲ್ವೇ? ತೀರಾ ಸ್ತ್ರೀರೇ ಒಗ್ಸಿದರೆ ಹ್ಯಾಗೆ ತಾನೇ ಬರದೇ ಇರುತ್ತೆ ಸಿಟ್ಟು? ಸಧ್ಯ, ದೇವರು ಮಾನಾ ಉಳಿಸಿದ, ಸುಮುಕೋಮಲಮ್ಮನೆದುರಿಗೆ!.... [ಗಂಡನಿಗೆ:]....ಇಗೋ ಇಲ್ಲೇ ಇದ್ಯಲ್ಲಾಂದ್ರೆ ಬೆತ್ತಾ! ತಕೊಳ್ಳೀಂದ್ರೆ ....[ಎನ್ನುತ್ತ ಬೆತ್ತವನ್ನು ಕೊಟ್ಟು, ಹತ್ತಿರ ನಿಂತು, ಉದ್ವೇಗದಿಂದ:] ಚೆನ್ನಾಗಿ ಬಿಗೀರೀಂದ್ರೆ ಎರಡೇಟು ನನ್ಗಾ—ಕಿರಿಚ್ಕೊಳ್ಳೋ ಹಾಗೇ!

ಸುಮಕೋಮಲ : [ತನ್ನಲ್ಲಿ].... ಹುಂ! ಈಕೀಗೆ ಜಗಳಾಡೋದು ಬರೋದಿಲ್ಲಾಂತ ಆಯ್ತು ಇಲ್ಲೀಗೆ!

ಶಾಂತಪತಿ : ನಿನ್ನ ಯಾಕೆ ಹೊಡೀಬೇಕೂ?

ಲಕ್ಷಮ್ಮತ್ತಿಗೆ : ನಿಮ್ಮ ಕೈಲಿ ಸೀರೆ ಒಗ್ಸಿಲ್ವೇ? ಅದು ತುಂಬಾ ತಪ್ಪಲ್ವೇ? ಅದಕ್ಕೆ!....ಹೂಂ, ಬೀಳ್ಳಿ ಬೆನ್ ಮೇಲೆ....ಹಾಯ್ ಅಂತೀನಿ ....[ಎಂದು ಬೆನ್ನು ಒಡ್ಡುವಳು]

ಶಾಂತಪತಿ : ಛೇ ಛೇ, ಅಂಥಾಮಹಾಪರಾಧವಾದರೂ ಏನು ಇದರಲ್ಲೀ?....[ಎನ್ನುತ್ತ (ಯ) ದಂಡೆಯ ಕಡೆಗೆ ಹೊರಡುವನು.]

ಲಕ್ಷಮ್ಮತ್ತಿಗೆ: [ಗಂಡನನ್ನು ಅಡ್ಡಗಟ್ಟಿ,]....ನಿಮ್ಮ ದಮ್ಮಯ್ಯ್ಯಾಂದ್ರೆ,....

ಶಾಂತಪತಿ : ತೆಗಿ, ದಾರೀ ಬಿಡು....[ಎನ್ನುತ್ತ ಬೆತ್ತದ ಸಹಾಯದಿಂದ ಸೀರೆಯನ್ನು ದಂಡೆಯ ಮೇಲಕ್ಕೆ ಹಾಕತೊಡಗುವನು.]

[ಪ್ರವೇಶ (ಅ): ತ್ರಿಪುರಾಂತಕಯ್ಯ]

ತ್ರಿಪುರಾಂತಕಯ್ಯ : [ಬಾಗಿಲಲ್ಲೇ ನಿಂತು, ಹೆಂಡತಿಗೆ :] ಏನ್ ಸುಮಾ ಇಷ್ಟೊತ್ತ್ಮಾಡಿದೆ?......[ಭಾವನ ಕಡೆ ನೋಡಿ, ನಗು ತಡೆಯಲಾರದೆ ಬಾಯಿಗೆ ಕರವಸ್ತ್ರ ಮುಚ್ಚಿಕೊಂಡು, ಮೆಲ್ಲನೆ :]....ಇದೇನಿದೂ?! ಛೇ ಛೇ!

ಸುಮಕೋಮಲ : [ಕಿರುನಗೆಯಿಂದ ಮೆಲ್ಲನೆ :] ......ಅವರ ಜಗಳ!

ಲಕ್ಷಮ್ಮತ್ತಿಗೆ :[ತ್ರಿಪುರಾಂತಕಯ್ಯನ ಕಡೆ ನೋಡಿ, ಗಂಡನಿಗೆ :]ಅಯ್ಯೋ ಹೋಗ್ಲಿ ಇಲ್ಲಿ ಕೊಡೀಂದ್ರೆ, ಯಾರಾದ್ರೂ ನೋಡ್ತಾರೂ.........[ಎನ್ನುತ್ತ ಗಂಡನ ಮುಂದೆ ನಿಂತು, ಎರಡು ತೋಳನ್ನೂ ಮೇಲಕ್ಕೆತ್ತಿ, ಬೆತ್ತವನ್ನು ಇಸುಕೊಳ್ಳುವುದಕ್ಕೆ ಪ್ರಯತ್ನಿಸುವಳು.]

ಶಾಂತಪತಿ : [ಬೆತ್ತದಿಂದ ದಂಡೆಯ ಮೇಲಿರುವ ಸೀರೆಯನ್ನು ಹರವುತ್ತ ನಿಧಾನವಾಗಿ :]........ಯ್ಯಾರು ನೋಡ್ತಾರೆ?.... ...ಒಂದ್ವೇಳೆ ನೋಡಿದರೆ ತಾನೇ ಏನೂ?—ನನ್ನ ಸ್ವಂತ ಮನೇ ಕೆಲಸಾ ತಾನೇ?

ಲಕ್ಷಮ್ಮತ್ತಿಗೆ : [ಹತಾಶಳಾಗಿ (ಲ) ಎಂಬಲ್ಲಿಗೆ ಬರುತ್ತ, ತನ್ನಲ್ಲಿ] ನಾನು ಸುಮ್ಮನೇ ಆದ್ರೂ ಇದ್ದಿದ್ರೆ ಚನ್ನಾಗಿತ್ತು!......[ (ಲ) ಎಂಬಲ್ಲಿ ನಿಲ್ಲುವಳು.]

ಸುಮಕೋಮಲ : [ಸದ್ದಾಗದಂತೆ ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟುಕೊಂಡು ಅತ್ತಿಗೆಯ ಬಳಿಗೆ ಬಂದು, ಮೆಲ್ಲನೆ :]....ಹೋಗ್ಲೀ ಬಿಡತ್ತಿಗೇ ಅಲ್ಲಿಗೇ.... [ಎಂದು ಹೇಳಿ, ಮತ್ತೆ (ಅ) ಬಳಿಗೆ ಹೋಗುವಳು.]

ಶಾಂತಪತಿ : [ಹಸ್ತಗಳನ್ನು ಕೊಡವಿಕೊಳ್ಳುತ್ತ ಮಧ್ಯರಂಗಕ್ಕೆ ಬಂದು, ಹೆಂಡತಿಗೆ:] ಇನ್ನೂ ಏನಾದ್ರೂ ಬಾಕೀ ಇದ್ಯೋ,........ಅಥ್ವಾ ನಾನು ವೆಂಕಟ್ರಮಣಸ್ವಾಮೀ ದೇವಸ್ಥಾನಕ್ಕೆ ಹರಿಕಥೆಗ್ಹೋಗಿ ಬರಲೋ ?...... [ಮಡಿಸಿರುವ ಬನಿಯನ್ ತೋಳು ಸರಿಪಡಿಸಿಕೊಳ್ಳುವನು.]

ಲಕ್ಷಮ್ಮತ್ತಿಗೆ : [ವ್ಯಥೆಯಿಂದ :] ಆಗೋದೆಲ್ಲಾ ಆಗೇಹೋಯ್ತು ಲ್ಲಾಂದ್ರೇ,......ಬಾಕಿ ಇನ್ನೇನು ತಾನೇ ಉಳಿಸಿದ್ದೀರಿ ?

ಶಾಂತಪತಿ : ಸರೀ ಹಾಗಾದ್ರೆ !.........[ಹೆಗಲು ಮೇಲೆ ಟವಲು ಹಾಕಿ ಕೊಂಡು,]........ನಾನು ಹೋಗಿ ಬರ್ತೀನಿ ದೇವಸ್ಥಾನಕ್ಕೆ—ಹೀಗೇ ಹಿತ್ಲು ಬಾಗ್ಲಿಂದ!....ಜೈ ಸದ್ಗುರು ಶಾಂತಾನಂದ ! ! !

[ನಿರ್ಗಮ (ಉ) : ಶಾಂತಪತಿ]

[ಲಕ್ಷಮ್ಮನು ಸೆರಗಿನಿಂದ ಕಣ್ಣೊರಿಸಿಕೊಳ್ಳುತ್ತ (ಟ) ಕುರ್ಚಿಯಲ್ಲಿ ಕುಳಿತು ಕೊಳ್ಳುವಳು. ಸುಮುಕೋಮಲ ಮತ್ತು ತ್ರಿಪುರಾಂತಕಯ್ಯ (ರ) ಎಂಬಲ್ಲಿಗೆ ಬರು ವರು]

ತ್ರಿಪುರಾಂತಕಯ್ಯ [ಹೆಂಡತಿಗೆ :] ಆ ಬೀಗದ ಕೈ ಕೊಡು ಇಲ್ಲಿ. ನಾನು ಮನೆಗ್ಹೋಗ್ತೀನೀ, ನೀನು ಸ್ವಲ್ಪಾ ಹೊತ್ತು ಇಲ್ಲೇ ಇದ್ದೂ, ಆಕೀಗೆ ಸಮಾಧಾನ ಹೇಳಿಬಿಟ್ ಬಾ....[ಬೀಗದ ಕೈ ಸಮೇತ (ಅ) ಕಡೆಗೆ ಹೋಗುತ್ತ, ತನಲ್ಲಿ:]....ಓಳ್ಳೇ ಶಾಂತಿ ಸಾಧನೆ ಈತನದು !!

[ನಿರ್ಗಮ (ಅ) : ತ್ರಿಪುರಾಂತಕಯ್ಯ]

ಲಕ್ಷಮ್ಮತ್ತಿಗೆ : [ಗಿಳಿಯೊಂದನ್ನು ಕೈಯಲ್ಲಿ ಹಿಡಿದು ಬಿಕ್ಕಿ ಬಿಕ್ಕಿ ದುಃಖಿ ಸುತ್ತ] ಕಡೆಗೂ ಒಂದೇಟಾದ್ರೂ ಹಾಕ್ಲಿಲ್ವಲ್ಲೇ ಸ್ಸುಂಕೋಮ್ಲಮ್ಮಾ! ಛ್ಹಿಂ.....ಛ್ಹಿಂ......

ಸುಮುಕೋಮಲ : [ಅತ್ತಿಗೆಯ ಬಲಗಡೆ ನಿಂತು, ಆಕೆಯ ತಲೆಯನ್ನು ನೇವರಿಸುತ್ತ, ನಗುವನ್ನು ನುಂಗಿಕೊಳ್ಳುತ್ತ,]...ನನಗೂ ಅದೇ ಚಿಂತೆ ಅತ್ತಿಗೇ! —ನಿನಗೆ ಕಡೆಗೆ ಒಂದೇಟಾದ್ರೂ ಬಿದ್ದಿದ್ರೆ ನನಗೂ ಎಷ್ಟೋ ಸಮಾ ಧಾನ್ವಾಗಿರ್ತಾ ಇತ್ತು!....ಆದ್ರೆ ಒಬ್ಬೊಬ್ಬರು ಒಂದೊಂದ್ ನಮೂನೆ! ಹಾಗಿರೋರನ್ನ ಹೀಗ್ಮಾಡೋದಕ್ಕಾಗೋದಿಲ್ಲ! ಅವರವರ ಪಾಲಿಗೆ ಬಂದದ್ದು ಅವರವರು ಅನುಭವಿಸಬೇಕು ; ಮತ್ತೇನ್ಮಾಡೋದಕ್ಕೂ ಆಗೋದಿಲ್ಲ!....ಸಮಾಧಾನಾ ತಂದ್ಕೋ....

**[ಅಂಕದ ತೆರೆ ಬೀಳುವುದು]**

—ಸಂಪೂರ್ಣಂ—

## ಕ್ಷೀರಸಾಗರರ ನಾಟಕಗಳು

| | | | |
|---|---|---|---|
| ಅನಂತ ವಂದನೆ<br>—ಅಥವಾ ಮೊಮ್ಮಗನ ಮಡದಿ | ೦ | ೮ | ೦ |
| ಏಕಪಾತ್ರಾಭಿನಯಗಳು<br>—ಮಲ್ಲಿಗೇ ಚಪ್ಪರ ಮತ್ತು ಲಾಯರ ಪ್ರಯಾಣ | ೦ | ೬ | ೦ |
| ಕಲಹ ಕುತೂಹಲ | ೧ | ೦ | ೦ |
| ದೀಪಾವಳಿ<br>—ಅಥವಾ ಅಳಿಯನ ಅರೈವಲ್ | ೦ | ೧೨ | ೦ |
| ನಮ್ಮೂರಿನ ಪಶ್ಚಿಮಕ್ಕೆ | ೦ | ೬ | ೦ |
| ನಿತ್ಯನಾಟಕ<br>—ಅಥವಾ ಮನೆಯಲ್ಲೇ ಮ್ಯಾಟನೀ. | ೦ | ೮ | ೦ |
| ನಿಶ್ಚಿತಾರ್ಥ<br>—ಅಥವಾ ಭರಚುಕ್ಕಿ | ೦ | ೧೨ | ೦ |
| ಲಕೀ ಲಕ್ಷ್ಮಣ್. | ೦ | ೧೦ | ೦ |
| ಶಾಮಣ್ಣನ ಸಾಹಸ | ೦ | ೧೦ | ೦ |

# ನಮ್ಮ ಪ್ರಕಟನೆಗಳು

**ಎ. ಎನ್. ಮೂರ್ತಿರಾವ್—**

- ಯೋಧನ ಪುನರಾಗಮನ [illegible]
- ಪಾಶ್ಚಾತ್ಯ ಸಣ್ಣ ಕತೆಗಳು [illegible]

**ಎಂ. ಗೋಪಾಲಕೃಷ್ಣ ಅಡಿಗ—**

- ಸುವರ್ಣ ಕೀಟ [illegible]
- ರೈತರ ಹುಡುಗಿ [illegible]

**ಶ್ರೀ—**

- ಪಾರಸೀಕರು . . ಅಚ್ಚಿನಲ್ಲಿ
- ಇಂಗ್ಲಿಷ್ ಗೀತೆಗಳು . ..
- ಹೊಂಗನಸುಗಳು [illegible]

**ಜಿ. ಹನುಮಂತರಾವ್—**

- ಋಗ್ವೇದ ಸೂಕ್ತಗಳು [illegible]
- ವಿಜ್ಞಾನ [illegible]

---

ವಿಶ್ವಸಾಹಿತ್ಯ ★ ಪ್ರಕಾಶಕರು ★ ಮೈಸೂರು